


# ಕನ್ನಡ ವಿಶ್ವವಿದ್ಯಾಲಯ ಹಂಪಿ

2013–14 ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ನಿಬಂಧ

## ಅಜ್ಞಾತನೊಬ್ಬನ ಆತ್ಮಚರಿತ್ರೆ : ಒಂದು ಅಧ್ಯಯನ

ನಿಬಂಧಕಾರರು
ಆರ್. ಮರಿಸ್ವಾಮಿ
ಎಂ.ಫಿಲ್. ನೋಂದಣಿ ಸಂಖ್ಯೆ:
**KVTMKS-00676**

ಮಾರ್ಗದರ್ಶಕರು
ಡಾ.ಲೀಲಾ ಅಪ್ಪಾಜಿ
ಪ್ರಾಂಶುಪಾಲರು
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು.



2013–14



# ಕನ್ನಡ ವಿಶ್ವವಿದ್ಯಾಲಯ ಹಂಪಿ

2013–14 ನೇ ಸಾಲಿನ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ
ಸಲ್ಲಿಸಿದ ನಿಬಂಧ

# ಅಜ್ಞಾತನೊಬ್ಬನ ಆತ್ಮಚರಿತ್ರೆ : ಒಂದು ಅಧ್ಯಯನ

ನಿಬಂಧಕಾರರು
ಆರ್. ಮರಿಸ್ವಾಮಿ
ಎಂ.ಫಿಲ್. ನೋಂದಣಿ ಸಂಖ್ಯೆ:
KVTMKS-00676

ಮಾರ್ಗದರ್ಶಕರು
ಡಾ.ಲೀಲಾ ಅಪ್ಪಾಜಿ
ಪ್ರಾಂಶುಪಾಲರು
ಮಹಿಳಾ ಸರ್ಕಾರಿ ಕಾಲೇಜು, ಮಂಡ್ಯ.

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್
ಜಯಲಕ್ಷ್ಮೀಪುರಂ, ಮೈಸೂರು.

2013–14

# <u>ಮಾರ್ಗದರ್ಶಕರ ಪ್ರಮಾಣ ಪತ್ರ</u>

2013-14 ನೇ ಸಾಲಿನಲ್ಲಿ ನೋಂದಣಿ ಸಂಖ್ಯೆ **KVTMKS-00676** ರ ಹಂಪಿ ವಿಶ್ವವಿದ್ಯಾಲಯದ ಎಂ.ಫಿಲ್ ಪದವಿಯ ವಿದ್ಯಾರ್ಥಿಯಾದ ಮರಿಸ್ವಾಮಿ. ಆರ್ ಅವರು ನನ್ನ ಮಾರ್ಗದರ್ಶನದಲ್ಲಿ **'ಅಜ್ಞಾತನೊಬ್ಬನ ಆತ್ಮಚರಿತ್ರೆ – ಒಂದು ಅಧ್ಯಯನ'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತಾರೆ.

ಈ ಸಂಶೋಧನಾ ನಿಬಂಧವನ್ನು ಇವರು ಈ ಮೊದಲು ಭಾಗಶಃವಾಗಿಯಾಗಲೀ, ಪೂರ್ಣವಾಗಿಯಾಗಲೀ, ಬೇರೆ ಯಾವುದೇ ಪದವಿ ಅಥವಾ ಡಿಪ್ಲೋಮಗಳಿಗಾಗಲೀ ಒಪ್ಪಿಸಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

ಮಾರ್ಗದರ್ಶಕರು

**ಡಾ.ಲೀಲಾ ಅಪ್ಪಾಜಿ**

ಪ್ರಾಂಶುಪಾಲರು

ಮಹಿಳಾ ಸರ್ಕಾರಿ ಕಾಲೇಜು,

ಮಂಡ್ಯ.

**ಸ್ಥಳ : ಮೈಸೂರು**

**ದಿನಾಂಕ : 15.07.2014**

# ಅಭ್ಯರ್ಥಿಯ ಘೋಷಣಾ ಪತ್ರ

ಕನ್ನಡ ವಿಶ್ವವಿದ್ಯಾಲಯದಲ್ಲಿ ಎಂ.ಫಿಲ್ ಪದವಿ ವಿದ್ಯಾರ್ಥಿಯಾಗಿ ಅಧ್ಯಯನ ಮಾಡುತ್ತಿರುವ ನಾನು **ಡಾ.ಲೀಲಾ ಅಪ್ಪಾಜಿ ಅವರ ಮಾರ್ಗದರ್ಶನದಲ್ಲಿ** ಎಂ.ಫಿಲ್ ಪದವಿಯ ಒಂದು ಭಾಗವಾದ ನಿಬಂಧ ರಚನೆಗೆ ಸಂಬಂಧಿಸಿದಂತೆ **'ಅಜ್ಞಾತನೊಬ್ಬನ ಆತ್ಮಚರಿತ್ರೆ – ಒಂದು ಅಧ್ಯಯನ'** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಸಂಶೋಧನಾ ನಿಬಂಧವನ್ನು ಸಿದ್ಧಪಡಿಸಿರುತ್ತೇನೆ. ಈ ಸಂಶೋಧನಾ ನಿಬಂಧವನ್ನು ಈ ಮೊದಲು ಭಾಗಶಃವಾಗಲೀ ಪೂರ್ಣವಾಗಿಯಾಗಲೀ ಬೇರಾವುದೇ ಪದವಿ ಅಥವಾ ಡಿಪ್ಲೋಮಗಳಿಗಾಗಲೀ ಒಪ್ಪಿಸಿಲ್ಲವೆಂದು ಪ್ರಮಾಣಿಕರಿಸುತ್ತೇನೆ.

R. Mariswamy

**ಮರಿಸ್ವಾಮಿ ಆರ್**

**ಸ್ಥಳ : ಮೈಸೂರು**

**ದಿನಾಂಕ : 15.07.2014**

ನೋಂದಣಿ ಸಂಖ್ಯೆ **KVTMKS-00676**

ಕನ್ನಡ ಎಂ.ಫಿಲ್. ವಿದ್ಯಾರ್ಥಿ

ಶ್ರೀ ಕುವೆಂಪು ವಿದ್ಯಾವರ್ಧಕ ಟ್ರಸ್ಟ್

ಜಯಲಕ್ಷ್ಮೀಪುರಂ, ಮೈಸೂರು.

ಪರಿವಿಡಿ

# 'ಅಜ್ಞಾತನೊಬ್ಬನ ಆತ್ಮಚರಿತ್ರೆ' : ಒಂದು ಅಧ್ಯಯನ

# ಅಜ್ಞಾತನೊಬ್ಬನ ಆತ್ಮಚರಿತ್ರೆ : ಒಂದು ಅಧ್ಯಯನ

**ಪೀಠಿಕೆ :**

ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಪ್ರಕಾರಗಳಲ್ಲಿ ಕಾದಂಬರಿಯೂ ಒಂದು. ಕಾದಂಬರಿ ಪ್ರಕಾರವು ಹೆಚ್ಚು ಓದುಗರನ್ನು ತನ್ನೆಡೆಗೆ ಸೆಳೆದುಕೊಳ್ಳುವ ವಿಶಿಷ್ಟ ಸಾಹಿತ್ಯ ಪ್ರಕಾರವಾಗಿದೆ. ಕಾದಂಬರಿ ಸಾಹಿತ್ಯ ಪ್ರಕಾರವು ಆರಂಭ ಕಾಲದಿಂದ ಇಂದಿನವರೆಗೆ ಅನೇಕ ವಸ್ತುವಿಷಯವನ್ನು ಒಳಗೊಂಡು ಭಿನ್ನಭಿನ್ನ ಮಾದರಿಯಲ್ಲಿ ನಿರೂಪಿಸುತ್ತಾ ಬಂದಿದೆ. ಅಂತಹ ವಸ್ತುವಿಷಯಗಳಲ್ಲಿ ಐತಿಹಾಸಿಕ ಘಟನೆಯನ್ನು ಇಟ್ಟುಕೊಂಡು ರಚನೆಯಾದ ಕಾದಂಬರಿಗಳೂ ಒಂದು ಪ್ರಕಾರವಾಗಿದೆ. ಐತಿಹಾಸಿಕ ಘಟನೆಯನ್ನಾಧರಿಸಿದ ಕಾದಂಬರಿಗಳು ಕನ್ನಡ ಸಾಹಿತ್ಯದಲ್ಲಿ ಅನೇಕ ಇವೆ. ಅಂತಹುಗಳಲ್ಲಿ ಇಪ್ಪತ್ತೊಂದನೆ ಶತಮಾನದದಲ್ಲಿ ಜಾನಪದ ನಿಧಿ ಎಂದೇ ಪ್ರಸಿದ್ಧರಾದ ಕೃಷ್ಣಮೂರ್ತಿ ಹನೂರರು ರಚಿಸಿದ 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯೂ ಒಂದಾಗಿದೆ.

ಕೃಷ್ಣಮೂರ್ತಿ ಹನೂರರು ಬಹುಮುಖ ಪ್ರತಿಭೆಯ ಸಾಹಿತಿ. ಜಾನಪದ ವಿದ್ವಾಂಸರು, ಸಂಶೋಧಕರು, ವಿಮರ್ಶಕರು, ಕಥೆಗಾರರು, ಕಾದಂಬರಿಕಾರರೂ ಆದ ಅವರು ಮೈಸೂರು ವಿಶ್ವವಿದ್ಯಾನಿಲಯದ ಪ್ರಾಧ್ಯಾಪಕರಾಗಿದ್ದರು. ಗ್ರಾಮೀಣ ಬದುಕಿನ ನಾಡಿಮಿಡಿತ ಬಲ್ಲ ಅವರು ಜಾನಪದ ಜೀವಸೆಲೆಯನ್ನು ತಮ್ಮ ಕೃತಿಗಳಲ್ಲಿ ಪಡಿಮೂಡಿಸಿದ್ದಾರೆ. ಜಾನಪದ ಕಲೆ, ಸಾಹಿತ್ಯ, ಸಂಸ್ಕೃತಿಯನ್ನು ತಮ್ಮ ಉಸಿರಾಗಿಸಿಕೊಂಡಿದ್ದಾರೆ. ಗ್ರಾಮೀಣ ಮುಖವಾಣಿಯಾಗಿ ಸೃಜನಶೀಲ ಚಟುವಟಿಕೆಯಲ್ಲಿ ತಮ್ಮನ್ನು ತೊಡಗಿಸಿಕೊಂಡಿರುವ ಹನೂರರು ವೈವಿಧ್ಯಮಯವಾದ ೩೬ ಕೃತಿಗಳನ್ನು ರಚಿಸಿದ್ದಾರೆ. ಅವರ ಸೃಜನಶೀಲ ಬರಹದ ಪ್ರತೀಕವೇ 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಾಗಿದೆ.

'ಅಜ್ಞಾತನೊಬ್ಬನ ಆತ್ಮ ಚರಿತ್ರೆ' ಕೃಷ್ಣಮೂರ್ತಿ ಹನೂರರ ಮೂರನೆ ಕಾದಂಬರಿ. ಇದು ಕನ್ನಡ ಸಾರಸ್ವತಲೋಕದಲ್ಲಿ ಸೃಜನಶೀಲ ಪ್ರಕ್ರಿಯೆಯ ವೈಶಿಷ್ಟ್ಯಪೂರ್ಣ ಕಾದಂಬರಿ. ಐತಿಹಾಸಿಕ ಮಾಹಿತಿ, ದಂತಕಥೆ, ಪುರಾಣಗಳ ಸಂಗಮವಾಗಿದೆ. ಟಿಪ್ಪು ಸುಲ್ತಾನನ ಅರಮನೆಯ ದಳವಾಯಿಯ ಆತ್ಮಚರಿತ್ರೆಯೇ ಈ ಕಾದಂಬರಿಯ ಕಥಾವಸ್ತು. ಇದು ಆಧುನಿಕ ಕನ್ನಡ ಸಾಹಿತ್ಯ ಚರಿತ್ರೆಯ ಮಹತ್ವವನ್ನು ಎತ್ತಿ ಹಿಡಿಯುವಂತಹ ಶ್ರೇಷ್ಠ ಕಾದಂಬರಿಯಾಗಿದೆ.

'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ತನ್ನ ಹೆಸರೇನು ಎಂದು ತನಗೆ ತಿಳಿಯದ ವ್ಯಕ್ತಿ ಇಡೀ ಕಾದಂಬರಿಯ ಕೇಂದ್ರ, ಈತ ತನ್ನ ಜೀವನದಲ್ಲಿ ನಡೆದ ಅನೇಕ ಘಟನೆಗಳನ್ನು ತನ್ನ ಮನಸ್ಸಿನ ದುಗುಡವನ್ನು ನೀಗಿಸಿಕೊಳ್ಳಲೋಸುಗ ಬರೆಯುತ್ತಾನೆ. ಕೊನೆಯಲ್ಲಿ ಯಾರು ಇದನ್ನು

ಓದಬಾರದೆಂಬ ಮನವಿಯನ್ನು ಇಟ್ಟಿದ್ದಾನೆ. ಹನೂರರು ನಶಿಸುತ್ತಿರುವ ಅಥವಾ ನಶಿಸುವ ವಿಷಯಗಳನ್ನು ಆಯ್ದುಕೊಳ್ಳುವ ಸಂಶೋಧಿಸುವ ಮನೋಪ್ರವೃತ್ತಿ ಉಳ್ಳವರಾದ್ದರಿಂದ ನಮಗೆ ಇಂತಹ ಉತ್ತಮ ಕೃತಿ ನೀಡಿದ್ದಾರೆ.

ಈ ಕಾದಂಬರಿಯ ಬಗ್ಗೆ ಮೆಚ್ಚುಗೆಯ ಮಾತನಾಡುತ್ತಾ ಕನ್ನಡದ ಕವಿ ಹಾಗೂ ನಾಟಕರಾದ, ಜ್ಞಾನಪೀಠ ಪುರಸ್ಕೃತರಾದ ಗಿರೀಶ ಕಾರ್ನಾಡರು 'ಈ ಕೃತಿಯ ಸ್ವರೂಪ ವಿಸ್ಮಯಗೊಳಿಸುವಷ್ಟು ಹೊಸತಾಗಿದೆ. ಇದು ಇತಿಹಾಸವೋ, ದಂತಕಥೆಯೋ, ಜಾನಪದ ಆಖ್ಯಾನಿಕಿಯೋ, ಕಾವ್ಯಮಯ ಕಥನವೋ ಎಂದು ವರ್ಗಿಕರಿಸಲು ಯತ್ನಿಸುವುದು ಅದರ ಶ್ರೀಮಂತ ಕ್ರಿಯಾ ಪರಿಸರಕ್ಕೆ ಅನ್ಯಾಯ ಬಗೆದಂತೆ. ಟಿಪ್ಪು ಸುಲ್ತಾನನ ಕಾಲದ ದಳವಾಯಿಯ ಕತೆಯಿಂದ ಆರಂಭವಾಗುವ ಈ ಕಥಾನಕ ಈ ಎಲ್ಲ ಪ್ರಕಾರಗಳನ್ನು ಬಳಸುತ್ತ, ಒಂದರಿಂದ ಇನ್ನೊಂದಕ್ಕೆ ಸಲೀಸಾಗಿ ಜಾರುತ್ತ, ದೇಶಕಾಲಗಳ ಸೀಮೆ ದಾಟುತ್ತ, ಹಿಮ್ಮೆಟ್ಟುತ್ತ ಹೋಗುತ್ತದೆ. ಕೃಷ್ಣಮೂರ್ತಿ ಹನೂರರ ಬರವಣಿಗೆಯ ಅದ್ಭುತ ಚಿತ್ರಕ ಶಕ್ತಿ ಈ ಎಲ್ಲ ಬೇರೆ ಬೇರೆ ಲೋಕಗಳ ವಾಸ್ತವ ವಿವರಗಳನ್ನು ಕಣ್ಣಿಗೆ ಕಟ್ಟುವಂತೆ ಪುನಃ ಸೃಷ್ಟಿಸುತ್ತದೆ. ಅದರ ಜೊತೆಗೆ ಪಾತ್ರಗಳ ಸನ್ನಿವೇಶಗಳ ಭಾವನಾತ್ಮಕ ತುಮುಲಗಳ ನೈಜತೆ ಕೂಡ ಒಮ್ಮೆ ಓದಲಾರಂಭಿಸಿದರೆ ಕೊನೆಯ ಪುಟದವರೆಗೂ ಕೆಳಗಿಡಲಾಗದಂತೆ ವಾಚಕನನ್ನು ತನ್ನ ಸೆಳೆವಿನಲ್ಲಿ ಕೊಚ್ಚಿಕೊಂಡು ಹೋಗುತ್ತದೆ. ಹನೂರರ ವಿದ್ವತ್ತು, ಕಲ್ಪನಾ ಶಕ್ತಿ ಇವೆರಡನ್ನೂ ತಳಕು ಹಾಕಿರುವ ಅವರ ಸೋಪಜ್ಞತೆ ಬೆರಗುಗೊಳಿಸುವಂತವು'. ಎಂದು ಹೇಳಿರುವುದು ಈ ಕೃತಿಯ ಶ್ರೇಷ್ಠತೆಯನ್ನು ತಿಳಿಸುತ್ತದೆ.

ಹನೂರರು ಸಾಮಾನ್ಯ ಜನರ ಸ್ಥಿತಪ್ರಜ್ಞ ಮನಸ್ಥಿತಿ ಹಾಗೂ ಅವರಲ್ಲಿರುವ ಮಾನವಿಯತೆ ಕುರಿತು ಹಲವು ನಿದರ್ಶನಗಳನ್ನು ಕಾದಂಬರಿಯುದ್ದಕ್ಕು ನೀಡಿದ್ದಾರೆ. ಇದು ಸೈನಿಕನ ಆತ್ಮಕಥೆಯಾದರೂ ಸಮಾಜದಲ್ಲಿ ಸ್ವಲ್ಪದರಲ್ಲಿಯೇ ತೃಪ್ತಿಕಾಣುತ್ತ ಬದುಕುತ್ತಿರುವ ಜನಸಾಮಾನ್ಯರು ತಮಗಿಂತಲೂ ಲೋಕ ಹಿತಕ್ಕಾಗಿ ತುಡಿಯಬೇಕಾದ ಅಗತ್ಯತೆಯನ್ನು ತಿಳಿಸಿದ್ದಾರೆ.

ಆಧುನಿಕ ಕನ್ನಡ ಸಾಹಿತ್ಯದಲ್ಲಿ ಯಶಸ್ವಿ ಕಾದಂಬರಿಯೆನಿಸಿದ, ಅಪಾರ ಸಹೃದಯರ ಮನ ಮುಟ್ಟುವಂತೆ ಮೂಡಿಬಂದಿರುವ ಸಾಂಸ್ಕೃತಿಕ ಹಿರಿಮೆಯನ್ನು ಹೊಂದಿರುವ, ವಿದ್ವಾಂಸರ ಮೆಚ್ಚುಗೆಯನ್ನು ಗಳಿಸಿ, ಅಪಾರ ಓದುಗರನ್ನು ತನ್ನೆಡೆಗೆ ಸೆಳೆಯುತ್ತಿರುವ, ವಿಶಿಷ್ಟ, ವಿಭಿನ್ನ ನೆಲೆಯ, ಸಾಂಸ್ಕೃತಿಕ, ಸಾಹಿತ್ಯಕ ಹಾಗೂ ಜಾನಪದೀಯ ಹಿನ್ನೆಲೆಯ ಶ್ರೀಮಂತಿಕೆಯ ಶ್ರೇಷ್ಠ ಕಾದಂಬರಿ ಇದಾಗಿದೆ. ಇಂತಹ ಕಾದಂಬರಿಯನ್ನು ಕುರಿತು ವಿಭಿನ್ನನೆಲೆಯಲ್ಲಿ ಅಧ್ಯಯನ ಮಾಡಬೇಕಾದ ಅಗತ್ಯೆತೆ ಇಂದು ಹೇರಳವಾಗಿದೆ.

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ಐತಿಹಾಸಿಕ ಕಾದಂಬರಿಗಳ ಸೃಷ್ಟಿ ತೀರಾ ವಿರಳವಾಗುತ್ತಿರುವ ಈ ಕಾಲದಲ್ಲಿ ಇತಿಹಾಸ ನಡೆಗೆ ಭಂಗ ಬಾರದಂತೆ ಕಲ್ಪನೆಯ ಬಲದಿಂದ ಕೃತಿ ರಚಿಸಿದ ಹನೂರರ ಸೃಜನಶೀಲ ಬರಹದ ಪ್ರತೀಕವಾಗಿ ಮೂಡಿದ ಕೃತಿ ಅಜ್ಞಾತನೊಬ್ಬನ ಆತ್ಮಚರಿತ್ರೆ, ದಳವಾಯಿಯ ಆತ್ಮವೃತ್ತಾಂತ ಚಿತ್ರಿಸುವುದರೊಂದಿಗೆ ಆಳವಾದ ಬೌದ್ಧಿಕ ಚಿಂತನೆ, ರಾಜಕೀಯ, ಸಾಮಾಜಿಕ, ತಾತ್ವಿಕ ವಿಶ್ಲೇಷಣೆ, ಒಳಿತು ಕೆಡಕುಗಳ ಸಂಘರ್ಷ, ಮನುಷ್ಯ ಸ್ವಭಾವದ ವಿಶ್ಲೇಷಣೆ, ಸನ್ನಿವೇಶ ನಿರ್ಮಾಣದ ಅಂಶಗಳು ಇದರಲ್ಲಿವೆ. ಕೂತೂಹಲ ಕಥಾನಕ ಹೊಂದಿದ ಈ ಕಾದಂಬರಿಯಲ್ಲಿ ಆತ್ಮಚರಿತ್ರೆಯನ್ನು ದಪ್ತರಿನ ಮೂಲಕ ಹೇಳಿಸಿರುವ ಕ್ರಮವಿದೆ.

ಹನೂರರು ಕೇವಲ ಕಥೆಗಾಗಿ ಕೃತಿ ರಚಿಸದೆ ಜೀವನದ ವಾಸ್ತವಿಕತೆಯಂತೆ ಕಲ್ಪಿಸಿದ್ದಾರೆ. ಭ್ರಮೆ ವಾಸ್ತವಗಳ ನಡುವಿನ ತೊಳಲಾಟ, ಮನುಷ್ಯನ ಸುಖ-ದುಃಖಗಳ ಸಂವೇದನೆ, ಗಂಡು-ಹೆಣ್ಣಿನ ಸಂಬಂಧ, ಹಿಂಸೆ-ಕ್ರೌರ್ಯ, ಅಧಿಕಾರಕ್ಕಾಗಿ ನಡೆಯುವ ಕುತಂತ್ರ-ಸ್ವಾರ್ಥಗಳು ಕಾದಂಬರಿ ಉದ್ದಕ್ಕೂ ಕಂಡುಬರುತ್ತವೆ. ಜೀವನದ ನಾನಾ ಮುಖಗಳ ಚಿತ್ರಣಗಳಿವೆ. ಆಡುಮಾತಿನ ಬಳಕೆಯಿದೆ. ಲೇಖಕರ ಲೋಕಾನುಭವ ನಾಟಕೀಯ ಸನ್ನಿವೇಶಗಳನ್ನು ಸೃಷ್ಟಿಸಿದೆ. ಅನುಭವದ ನೆಲೆಗಳನ್ನು ಜೀವನದ ಸತ್ಯವನ್ನು ಕಾಣುವ ಪ್ರಯತ್ನ ಇಲ್ಲಿದೆ. ಇತಿಹಾಸದ ಘಟನೆಗಳನ್ನು ವಿಭಿನ್ನ ದೃಷ್ಟಿಯಲ್ಲಿ ಹನೂರರು ನೋಡಿದ್ದಾರೆ.

ಕೃಷ್ಣಮೂರ್ತಿ ಹನೂರರ ಈ ಕಾದಂಬರಿ ಅಜ್ಞಾತನ ಚರಿತ್ರೆಯ ಕತೆಯ ವಿವರಗಳಲ್ಲಿ ಕ್ಷೇತ್ರಕಾರ್ಯಗಳ ಅನುಭವಗಳ ಹಿನ್ನೆಲೆಯಿಂದ ದರ್ಶನವನ್ನು ಕಾಣಿಸುವ ಪ್ರಯತ್ನವಿದೆ. ಶ್ರೀರಂಗಪಟ್ಟಣವನ್ನು ಆಳಿದ ಟಿಪ್ಪು ಸುಲ್ತಾನನ ಕಾಲದ ಜನಜೀವನ, ಒಳನೋವುಗಳಿಗೆ ಅಜ್ಞಾತನ ಮೂಲಕ ಕನ್ನಡಿ ಹಿಡಿಯುತ್ತದೆ.

ಅಜ್ಞಾತನೊಬ್ಬನ ಆತ್ಮಚರಿತ್ರೆ ಅಧ್ಯಯನದ ಮೂಲಕ ಆ ಕಾಲದ ರಾಜಕೀಯ, ಕುಟುಂಬಗಳ, ಧರ್ಮಗಳ ಮೇಲೆ ಮಾತ್ರವಲ್ಲ ಸಮಗ್ರ ಆಡಳಿತದ ಪ್ರಭಾವ ಯಾವ ರೀತಿ ಇತ್ತು ಎಂಬುದನ್ನು ತಿಳಿಯಲು ಸಹಕಾರಿಯಾಗಿದೆ.

ಕೃಷ್ಣಮೂರ್ತಿ ಹನೂರರ ಅಜ್ಞಾತನೊಬ್ಬನ ಆತ್ಮಚರಿತ್ರೆ ಬಹುಮುಖ ಆಯಾಮ ಪಡೆದ ಉತ್ಕೃಷ್ಟ ಕಾದಂಬರಿ ಈ ಕಾದಂಬರಿಯಲ್ಲಿ ಬದುಕಿನ ನಾನಾ ಮುಖಗಳು ಅನಾವರಣಗೊಳ್ಳುತ್ತವೆ. ಇತಿಹಾಸದ ಕತೆಯ ಎಳೆಯ ಮೂಲಕ ಪ್ರಸಕ್ತ ಜೀವನಕ್ಕೆ ಅಗತ್ಯವಾದ ಅನುಭವ ವಿಶೇಷದಿಂದ ಕಲಿತ ಸಿದ್ಧಪಾಠವನ್ನು ನಮಗೆ ನೀಡುತ್ತದೆ.

ಅಧ್ಯಯನದ ಅನುಕೂಲಕ್ಕಾಗಿ ೬ ಅಧ್ಯಾಯಗಳನ್ನಾಗಿ ವಿಭಾಗಿಸಿಕೊಂಡಿದೆ.

**ಅಧ್ಯಾಯ- ೧**

**ಕೃಷ್ಣಮೂರ್ತಿ ಹನೂರು ಅವರ ಬದುಕು ಮತ್ತು ಬರಹ**

ಪ್ರಸಕ್ತ ಅಧ್ಯಯನದಲ್ಲಿ ಈ ಕಾದಂಬರಿ ರಚನೆಕಾರರಾದ ಕೃಷ್ಣಮೂರ್ತಿ ಹನೂರರ ಜೀವನವಿಚಾರ, ಅವರ ಬದುಕು ಮತ್ತು ಬರಹದ ಬಗ್ಗೆ ಅಧ್ಯಯನ ಮಾಡಲಾಗಿದೆ. ವಿಮರ್ಶಕರಾಗಿ, ಕಾದಂಬರಿಕಾರರಾಗಿ, ಜಾನಪದತಜ್ಞರಾಗಿ, ಸಾಹಿತಿಯಾಗಿ ಕೃಷ್ಣಮೂರ್ತಿ ಹನೂರರು ಕನ್ನಡ ಸಾಹಿತ್ಯ ಕ್ಷೇತ್ರಕ್ಕೆ ವಿಭಿನ್ನ ಸಾಹಿತ್ಯ ಪ್ರಕಾರಗಳಲ್ಲಿ ಸಾಹಿತ್ಯ ಕೃಷಿ ಮಾಡಿದ್ದು ಅವರ ಬದುಕೇ ಬರಹವಾಗಿದ್ದು, ೩೬ ಕ್ಕೂ ಹೆಚ್ಚು ಕೃತಿಗಳನ್ನು ನೀಡಿರುವ ಅವರ ಸಾಧನೆ, ಹಾಗೂ ಅವರ ಸಾಹಿತ್ಯ ಪ್ರೌಡಿಮೆಯನ್ನು ಅರಸಿ ಬಂದ ಪ್ರಶಸ್ತಿ ಪುರಸ್ಕಾರಗಳು, ಹಾಗೂ ವಿಭಿನ್ನ ಸಂಘ ಸಂಸ್ಥೆಗಳಲ್ಲಿ ಹನೂರರ ಸೇವೆ. ಜಾನಪದ ಹಾಗೂ ಸೃಜನಶೀಲ ಸಾಹಿತ್ಯಕ್ಕೆ ಹನೂರರ ಕೊಡುಗೆ ಮುಂತಾದವುಗಳ ಬಗ್ಗೆ ಪ್ರಸಕ್ತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ- ೨**

**'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ಚಾರಿತ್ರಿಕ ವಿಚಾರಗಳ ಅಧ್ಯಯನ**

ಕೃಷ್ಣಮೂರ್ತಿ ಹನೂರರ ಈ ಕಾದಂಬರಿಗೆ ಐತಿಹಾಸಿಕ ವಿಚಾರವೇ ಜೀವಾಳ. ಇತಿಹಾಸದ ಕಥೆಯ ಎಳೆಯನ್ನು ವರ್ತಮಾನದೊಡನೆ ಬೆಸೆದು ಬರೆದಿದ್ದಾರೆ. ವಾಸ್ತವವಾಗಿ ಈ ಕಾದಂಬರಿಯ ಕಥೆಯ ಕಾಲಘಟ್ಟ ೧೭೬೯. ಟಿಪ್ಪುವಿನ ಕಾಲಮಾನದಲ್ಲಿ ನಡೆದಿರಬಹುದಾದ ಈ ಕಥೆಯ ಎಳೆಯನ್ನು ವಿನೂತನವಾಗಿ ರಚಿಸಿದ್ದಾರೆ. ಇದು ಐತಿಹಾಸಿಕ ವಿಚಾರವನ್ನು ಒಳಗೊಂಡ ಕಾದಂಬರಿಯಾದರೂ ಟಿಪ್ಪುವಿನ ಆಸ್ಥಾನದಲ್ಲಿ ಸಾಮಾನ್ಯ ವ್ಯಕ್ತಿಯಾದ ದಳವಾಯಿಯೊಬ್ಬನ ಆತ್ಮಚರಿತ್ರೆಯನ್ನು ಕಾದಂಬರಿ ನಿರೂಪಿಸುತ್ತದೆ. ಆದರೂ ಕಾದಂಬರಿಯಲ್ಲಿ ಐತಿಹಾಸಿಕ ಸಂಗತಿಗಳಿದ್ದು ಟಿಪ್ಪುಸುಲ್ತಾನ ಮತ್ತು ಹೈದರಾಲಿಯ ಚಾರಿತ್ರಿಕ ವಿಚಾರಗಳು, ಅವರು ನಡೆಸಿದ ಯುದ್ದಗಳು, ಮದಕರಿನಾಯಕ ಮತ್ತು ಹೈದರಾಲಿಯ ಹೋರಾಟ ಸಂಧಾನ, ಒನಕೆಓಬವ್ವ, ಬ್ರಿಟಿಷರು ನಡೆಸಿದ ಮೈಸೂರು ಯುದ್ದಗಳು ಕಾದಂಬರಿಯಲ್ಲಿ ಬರುತ್ತದೆ. ಹೀಗಾಗಿ ಹೈದರಾಲಿ ಮತ್ತು ಟಿಪ್ಪುವಿನ ಚಾರಿತ್ರಿಕ ವಿಚಾರಗಳು ಹಾಗೂ ಆ ಕಾಲದ ಜನಜೀವನ ಮುಂತಾದ ಐತಿಹಾಸಿಕ ಸಂಗತಿಗಳು ಈ ಕಾದಂಬರಿಯಲ್ಲಿ ಹೇಗೆ ವ್ಯಕ್ತಗೊಂಡಿದೆ ಎಂಬುದನ್ನು ಪ್ರಸಕ್ತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

## ಅಧ್ಯಾಯ- ೩

### 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ಜಾನಪದೀಯ ಸಂಗತಿಗಳ ಅಧ್ಯಯನ

ಕೃಷ್ಣಮೂರ್ತಿ ಹನೂರರು ಮೂಲತಃ ಜಾನಪದ ವಿದ್ವಾಂಸರಾಗಿದ್ದು, ಪ್ರಸಕ್ತ ಕಾದಂಬರಿಯಲ್ಲಿ ಜಾನಪದದ ಸಂಗತಿಗಳು ಸಮೃದ್ಧಿಯಿಂದ ಕೂಡಿದೆ. ಅಜ್ಞಾತನೊಬ್ಬನ ಆತ್ಮಚರಿತ್ರೆಯನ್ನು ಹೇಳುವುದರೊಂದಿಗೆ ಜಾನಪದರ ನಂಬಿಕೆಗಳು, ಜನಪದರ ಜೀವನಶೈಲಿ, ಅಚಾರ-ವಿಚಾರ, ಸಂಪ್ರದಾಯಗಳು, ಸಾಮಾನ್ಯ ಜನರಲ್ಲಿ ಯುದ್ಧದ ಬಗ್ಗೆ ಇದ್ದ ದೋರಣೆ, ಜನಪದರು ಇತರರನ್ನು ಸತ್ಕರಿಸುವ ರೀತಿ, ಜನಪದ ಕಥೆ, ಜನಪದರಜೀವನ, ಸಂಸ್ಕೃತಿಯನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಕಾದಂಬರಿಯಲ್ಲಿ ಮೂಡಿಬಂದಿರುವ ಇಂತಹ ಜಾನಪದೀಯ ಸಂಗತಿಗಳನ್ನು ಈ ಅಧ್ಯಯನದ ಮೂಲಕ ಪ್ರಸ್ತುತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಅಧ್ಯಾಯ- ೪

### 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ಸ್ತ್ರೀ ಸಂವೇದನೆಯ ಅಧ್ಯಯನ

ಹನೂರರ ಈ ಕಾದಂಬರಿಯಲ್ಲಿ ಸ್ತ್ರೀಯರ ಬದುಕು-ಬವಣೆಯನ್ನು ಮನಮುಟ್ಟುವಂತೆ ಚಿತ್ರಿಸಿದ್ದಾರೆ. ಶತಮಾನಗಳಿಂದ ಪುರುಷಪ್ರಧಾನ ಸಮಾಜದ ತುಳಿತಕ್ಕೆ ಸಿಕ್ಕ ಹೆಣ್ಣಿನ ದುರಂತ ಬದುಕಿನ ವ್ಯಥೆಯ ಕಥೆ ಇಲ್ಲಿದೆ. ಈ ಕಾದಂಬರಿಯಲ್ಲಿ ದಳವಾಯಿ ಯೌವನದ ದಿನಗಳಲ್ಲಿ ನಡೆಸಿದ ದೌರ್ಜನ್ಯಕ್ಕೆ ಬಲಿಯಾದ ಹೆಣ್ಣುಗಳ ಗೋಳಿನ ಕಥೆ. ದಳವಾಯಿಯ ರಖಾವಿನ ದುರಂತ ಬದುಕು, ದಳವಾಯಿಗೆ ನೆಪಮಾತ್ರಕ್ಕೆ ಹೆಂಡತಿಯಾಗಿ ಒಂಟಿ ಬಾಳು ನಡೆಸಿ ಕೊನೆಯಲ್ಲಿ ತನ್ನ ಗಂಡನಿಗಾಗಿ ಪರಿತಪಿಸುವ ದಳವಾಯಿಯ ಹೆಂಡತಿಯ ದುರಂತ ಬದುಕು, ನೆರೆಮನೆಯ ಸೈನಿಕನ ಹೆಂಡತಿ ಪುರುಷ ಪ್ರಧಾನ ಸಮಾಜದ ದೌರ್ಜನ್ಯವನ್ನು ಪ್ರತಿಭಟಿಸುವ ಬಗೆ ಮುಂತಾದವುಗಳನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

## ಅಧ್ಯಾಯ- ೫

### 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ವಿಮರ್ಶಾತ್ಮಕ ಅಧ್ಯಯನ

ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯನ್ನು ಅನೇಕ ವಿದ್ವಾಂಸರು ವಿಭಿನ್ನ ನೆಲೆಯಲ್ಲಿ ವಿಮರ್ಶಿಸಿದ್ದಾರೆ. ವಿದ್ವಾಂಸರ, ವಿಮರ್ಶಕರ ಮೆಚ್ಚುಗೆಗೆ ಪಾತ್ರವಾದ ಹನೂರರ ಈ ಕಾದಂಬರಿಯನ್ನು ಸಮಗ್ರವಾಗಿ ವಿಭಿನ್ನ ನೆಲೆಯಲ್ಲಿ ವಿಶ್ಲೇಷಣಾತ್ಮಕವಾಗಿ ಪ್ರಸಕ್ತ ಅಧ್ಯಾಯದಲ್ಲಿ ಚರ್ಚಿಸಲಾಗಿದೆ. ಮೊದಲಿಗೆ ಕಾದಂಬರಿಯ ಕಥಾವಸ್ತು ಮತ್ತು ಹನೂರು ಅವರು ಅದನ್ನು

ವಿಭಿನ್ನವಾಗಿ ತಂದಿರುವ ಬಗೆ ಹಾಗೂ ಅದರ ಸಂಕ್ಷಿಪ್ತವಾದ ವಿಶ್ಲೇಷಣೆಯನ್ನು ಇಲ್ಲಿ ಮಾಡಲಾಗಿದೆ. ಕಥೆಯ ವಿಮರ್ಶಾತ್ಮಕ ವಿಶ್ಲೇಷಣೆಯಲ್ಲಿ ಇತಿಹಾಸದ ಕಥೆಯ ಎಳೆಯನ್ನು ವಿಭಿನ್ನವಾಗಿ ಕಾದಂಬರಿಯಲ್ಲಿ ನಿರೂಪಿಸಿರುವ ಬಗೆ, ನಂತರ ಕಾದಂಬರಿಯಲ್ಲಿ ಮೂಡಿಬಂದಿರುವ ಪಾತ್ರಗಳ ವಿಮರ್ಶತ್ಮಾಕ ವಿಶ್ಲೇಷಣೆಯನ್ನು ಪ್ರಸಕ್ತ ಅಧ್ಯಾಯದಲ್ಲಿ ಅಧ್ಯಯನ ಮಾಡಲಾಗಿದೆ.

**ಅಧ್ಯಾಯ-೬**

**'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ತಂತ್ರ ಮತ್ತು ಶೈಲಿಯ ಅಧ್ಯಯನ**

ಈ ಕಾದಂಬರಿಯ ರಚನೆಯಲ್ಲಿ ಹನೂರರು ಬಳಸಿರುವ ತಂತ್ರವನ್ನು ಕುರಿತು ಈ ಅಧ್ಯಯನದಲ್ಲಿ ಚರ್ಚಿಸಲಾಗಿದೆ. ಈ ಕಾದಂಬರಿ ಆತ್ಮಕಥನವನ್ನು ಒಳಗೊಂಡಿದ್ದರೂ ಅನೇಕ ಸಾಹಿತ್ಯ ಗುಣಗಳನ್ನು ತನ್ನೊಡಲಲ್ಲಿ ಹೊಂದುತ್ತಾ, ಜಾನಪದೀಯ ವಿಶಿಷ್ಟ ಶೈಲಿಯಲ್ಲಿ ಅನೇಕ ಕಥೆ ಉಪ ಕಥೆಗಳನ್ನು ಹೊಂದಿದ್ದರೂ ಎಲ್ಲೂ ಜಟಿಲವಾಗದೇ ಸಮೃದ್ದವಾಗಿ ಓದಗರನ್ನು ಗೊಂದಲಕ್ಕೆ ಸಿಲುಕಿಸದೇ ಸರಳವಾಗಿ ಸಾಗುತ್ತದೆ, ಹನೂರರ ಈ ಕಾದಂಬರಿಯ ರಚನಾ ಶೈಲಿ ಮತ್ತು ತಂತ್ರವನ್ನು ಈ ಅಧ್ಯಾಯದಲ್ಲಿ ಚರ್ಚಿಸಲಾಗಿದೆ.

ಹಾಗೆಯೇ ಪ್ರಸಕ್ತ ಅಧ್ಯಯನದ ಮೂಲಕ ಕಂಡುಬಂದ ಸಂಗತಿಗಳನ್ನು ಕೊನೆಯಲ್ಲಿ ಅಧ್ಯಯನದ ಫಲಿತಗಳಲ್ಲಿ ಚರ್ಚಿಸಲಾಗಿದೆ.

ಕಾದಂಬರಿಯಲ್ಲಿ ಮೂಡಿಬಂದಿರುವ ವಿಶಿಷ್ಟವಾದ ಅಂಶಗಳನ್ನು ಪ್ರಸಕ್ತ ಅಧ್ಯಯನದ ಕೊನೆಯಲ್ಲಿ ಅನುಬಂಧದಲ್ಲಿ ನೀಡಲಾಗಿದೆ.

## ಅಧ್ಯಾಯ : ೧

## ಕೃಷ್ಣಮೂರ್ತಿ ಹನೂರರ ಬದುಕು ಮತ್ತು ಬರಹ

ಕೃಷ್ಣಮೂರ್ತಿ ಹನೂರು ಚಾಮರಾಜನಗರ ಜಿಲ್ಲೆಯ ಕೊಳ್ಳೇಗಾಲ ತಾಲ್ಲೂಕಿನ ಹನೂರು ಗ್ರಾಮದಲ್ಲಿ ಗ್ರಾಮದಲ್ಲಿ ಮಾರ್ಚ್ ೨೦, ೧೯೫೦ ರಲ್ಲಿ ಜನಿಸಿದರು. ಪ್ರಾಥಮಿಕ ವಿದ್ಯಾಭ್ಯಾಸ ಹುಟ್ಟೂರಿನಲ್ಲಿ ನಡೆಯಿತು. ೧೯೭೩ರಲ್ಲಿ ಬೆಂಗಳೂರಿನ ವಿಜಯ ಕಾಲೇಜಿನಲ್ಲಿ ಬಿ.ಎ. ಆನರ್ಸ ಪದವಿಯನ್ನು ಪಡೆದ ಇವರು ೧೯೭೩ ರಲ್ಲಿ ಬೆಂಗಳೂರಿನ ಸೆಂಟ್ರಲ್ ಕಾಲೇಜಿನಲ್ಲಿ ಸ್ನಾತಕೋತ್ತರ ಪದವಿ ಪಡೆದರು. ೧೯೯೦ ರಲ್ಲಿ ಡಾ. ಎಂ. ಚಿದಾನಂದಮೂರ್ತಿಯವರ ಮಾರ್ಗದರ್ಶನದಲ್ಲಿ 'ಮ್ಯಾಸಬೇಡರು : ಬುಡಕಟ್ಟು ಅಧ್ಯಯನ' ಎಂಬ ವಿಷಯದಲ್ಲಿ ಪಿಎಚ್.ಡಿ ಪದವಿ ಪಡೆದರು. ೧೯೭೩ ರಿಂದ ೧೯೯೯ ರವರೆಗೆ ಕರ್ನಾಟಕದ ಬೇರೆ ಬೇರೆ ಸ್ಥಳಗಳಲ್ಲಿ ಅಧ್ಯಾಪಕರಾಗಿದ್ದ ಹನೂರರು ೧೯೯೦ ರಿಂದ ೨೦೧೨ರವರೆಗೆ ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯಲ್ಲಿ ಪ್ರಾಧ್ಯಾಪಕರಾಗಿದ್ದರು.

ನಡುಗನ್ನಡ, ಹಳೆಗನ್ನಡ ಹೊಸಗನ್ನಡ ಸಾಹಿತ್ಯದಲ್ಲಿ ಅಪಾರವಾದ ಆಶಕ್ತಿಯನ್ನು ಹೊಂದಿದ ಇವರು ಜಾನಪದ ಕ್ಷೇತ್ರದಲ್ಲಿಯೂ ವಿಶೇಷವಾದ ಆಶಕ್ತಿ ಹೊಂದಿದ್ದು ಸಾಕಷ್ಟು ಸಾಹಿತ್ಯ ಕೃಷಿ ಮಾಡಿದ್ದಾರೆ. ಆರು ಮಂದಿ ವಿಧ್ಯಾರ್ಥಿಗಳು ಇವರ ಅಮೂಲ್ಯವಾದ ಪಿಎಚ್.ಡಿ ಮಾರ್ಗದರ್ಶನ ಪಡೆದಿದ್ದಾರೆ.

ಕೃಷ್ಣಮೂರ್ತಿ ಹನೂರು ಜಾನಪದ ಹಾಗೂ ಸೃಜನಶೀಲ ಸಾಹಿತ್ಯ ಕ್ಷೇತ್ರದ ಪ್ರಮುಖ ವಿದ್ವಾಂಸರು. ಇವರು ತಮ್ಮ ಸಾಹಿತ್ಯ ಕೃಷಿಯಲ್ಲಿ ಕುವೆಂಪು ಕಾರಂತರ ಜೀವನ ಚಿಂತನಾ ವಿಚಾರಗಳು ಹಾಗೂ ಎಂ. ಚಿದಾನಂದಮೂರ್ತಿಯವರ ಸಂಶೋಧನಾ ಪ್ರವೃತ್ತಿಯನ್ನು ತಮ್ಮ ವ್ಯಕ್ತಿತ್ವದಲ್ಲಿ ಮೈಗೂಡಿಸಿಕೊಂಡಿದ್ದಾರೆ. ಜಾನಪದ ಸಾಹಿತ್ಯದ ಜೀವಸೆಲೆಯಾಗಿ ಜಾನಪದ ಕಲಾವಿದರಿದ್ದಂತೆ ಸೃಜನಶೀಲ ಸಾಹಿತ್ಯಕ್ಕೆ ಸಹೃದಯ ಮುಖ್ಯವೆಂಬುದು ಹನೂರರ ಅಭಿಪ್ರಾಯವಾಗಿದೆ. ಜಾನಪದ ಕ್ಷೇತ್ರಕಾರ್ಯ, ಸಂಶೋಧನೆಯೇ ಅವರಿಗೆ ಅಡಿಪಾಯವಾಗಿದೆ. ಅಧ್ಯಾಪನ ವೃತ್ತಿಯೊಂದಿಗೆ ಕ್ಷೇತ್ರಕಾರ್ಯದಲ್ಲಿ ತಮ್ಮನ್ನು ತೊಡಗಿಸಿಕೊಂಡವರು. ಕನ್ನಡ ಸಾಹಿತ್ಯ ಕರ್ನಾಟಕ ಸಾಂಸ್ಕೃತಿಕ ಇತಿಹಾಸ, ಜಾನಪದ ಹಾಗೂ ಶಾಸನಗಳನ್ನೊಳಗೊಂಡಂತೆ ಪ್ರಮುಖ ಕ್ಷೇತ್ರಗಳಲ್ಲಿ ಅವರ ಅರಿವು ಮಹತ್ವಪೂರ್ಣವಾದುದು. ಚಿತ್ರದುರ್ಗ ಜಿಲ್ಲೆಯ ಜಾನಪದ ಶ್ರೀಮಂತಿಕೆಯ ಮೇಲೆ ಬೆಳಕು ಚೆಲ್ಲಿದ ಅವರು ಅಲ್ಲಿನ ಜಾನಪದರ ಮೇಲೆ ಕ್ಷೇತ್ರಕಾರ್ಯ ನಡೆಸಿ ಅಲ್ಲಿನ ಜಾನಪದ ಶ್ರೀಮಂತಿಕೆಯನ್ನು ಪಸರಿಸಲು ಕಾರಣರಾಗಿದ್ದಾರೆ. ಚಿತ್ರದುರ್ಗ ಜಿಲ್ಲೆಯ ಮ್ಯಾಸ ಬೇಡ ಬುಡಕಟ್ಟು ಜನಾಂಗದ ಮೇಲೆ ಅಧ್ಯಯನ ನಡೆಸಿದ್ದಾರೆ.

"ಹನೂರರ ಕಥಾ ಪ್ರಪಂಚ ಗ್ರಾಮೀಣ ವಿವರಗಳನ್ನು ಸವಿವರವಾಗಿ ಅಭಿವ್ಯಕ್ತಿಸುತ್ತದೆ. ನವೋದಯದಲ್ಲಿ ಕುವೆಂಪು, ಕಾರಂತ, ಬೇಂದ್ರೆಯವರ ಸಾಹಿತ್ಯದಲ್ಲಿ ಕಂಡುಬರುವ ಜಾನಪದ ಪ್ರಜ್ಞೆ, ತೇಜಸ್ವಿ, ದೇವನೂರು ಮಹಾದೇವ ಅವರ ಕಥೆಗಳಲ್ಲಿನ ಗ್ರಾಮೀಣ ವಾತಾವರಣವನ್ನು ಇವರ ಕಥೆಗಳಲ್ಲಿ ಕಾಣಬಹುದು. ಅದರಲ್ಲೂ ಬುಡಕಟ್ಟು ಸಮಾಜದ ಸಂಸ್ಕೃತಿಯನ್ನು ಸೃಜನಶೀಲತೆಗೆ ತಿರುಗಿಸುವುದು ಕಷ್ಟದ ಕೆಲಸ. ಈ ಶ್ರಮದ ಕೆಲಸವನ್ನು ಹನೂರರು ತಮ್ಮ ಕಥೆಗಳಲ್ಲಿ ಯಶಸ್ವಿಯಾಗಿ ನಿರ್ವಹಿಸಿದ್ದಾರೆ."

ಹತ್ತು ಕಟ್ಟುವ ಕಡೆ ಒಂದು ಮುತ್ತು ಕಟ್ಟು ಎಂಬ ನಾಣ್ನುಡಿಯಂತೆ ಹನೂರರು ಬರೆದದ್ದಲ್ಲವೂ ಶ್ರೇಷ್ಠ ಸಾಹಿತ್ಯವಾಗಿದೆ. ಇವರು ಮಾತನಾಡಿದ್ದು ಕಡಿಮೆಯಾದರೂ ಸಾಧನೆ ಅಪಾರವಾದುದು ತುಂಬಾ ಗಂಭೀರ ಸ್ವಭಾವದ ಹನೂರರು ತಮ್ಮ ವಾಕ್‌ಚಾತುರ್ಯದಿಂದಲೇ ಎಲ್ಲರ ಮನಸ್ಸನ್ನು ಗೆಲ್ಲುತ್ತಾರೆ.

ಕೃಷ್ಣಮೂರ್ತಿ ಹನೂರು ಮೌನವಾಗಿ ಸಾಧಿಸಿದ್ದು ಬಹಳ. ಜಾನಪದ ಕೃತಿಗಳ ಸಂಪಾದನೆ, ಸಂಗ್ರಹ, ವಿಮರ್ಶೆ, ಚಿಂತನೆಗಳನ್ನು ಕುರಿತು ಹಲವು ಗ್ರಂಥಗಳನ್ನೂ ಹಲವು ಕಥಾಸಂಕಲನ ಕಾದಂಬರಿಗಳನ್ನು ರಚಿಸಿದ್ದಾರೆ. ಅವರ ಸೃಜನಶೀಲ ಬರಹಗಳು ಕನ್ನಡದ ಮಾರ್ಗಿಯ ಮತ್ತು ಜನಪದ ಕಥನ ಪರಂಪರೆಗಳ ಸಾರವನ್ನು ಒಳಗೊಂಡು ಮೈಸೂರು ಮತ್ತು ಕೊಳ್ಳೆಗಾಲದ ಪ್ರದೇಶದ ವಿಶಿಷ್ಟ ಆಡುಭಾಷೆಯ ಸೊಗಡಿನಿಂದ ಮನಸೆಳೆಯುತ್ತವೆ. ನವೋದಯ, ನವ್ಯ, ಬಂಡಾಯ ಇತ್ಯಾದಿ ಎಲ್ಲಾ ಪಂಥಗಳಿಂದ ದೂರ ಉಳಿದು ಪ್ರಚಲಿತ ರಾಜಕೀಯ ಸಿದ್ಧಾಂತಗಳ ಬಗ್ಗೆ ತಲೆ ಕೆಡಿಸಿಕೊಳ್ಳದೆ ದೈನಂದಿನ ಬದುಕಿನ ವಿವರಗಳಿಗೆ ನೇರವಾಗಿ ಮುಖ ಮಾಡುತ್ತಾ ಬಂದಿವೆ. ರಾಜಕಾರಣದಿಂದ ದೂರ ಉಳಿದು ಸೃಜನಶೀಲತೆಗೆ ಅಗತ್ಯವಾದ ಏಕಾಂತ ಮೌನ ಮತ್ತು ನಿಷ್ಪಕ್ಷಪಾತ ದೃಷ್ಟಿ ಅವರದು.

**ಸಾಹಿತ್ಯಕ ಕೊಡುಗೆಗಳು :**

ಹನೂರರ ಸಾಹಿತ್ಯ ಪ್ರೌಢಿಮೆಯಿಂದ ಹೊರ ಬಂದ ಕೃತಿಗಳು ಅನೇಕ. ಅವರು ಕನ್ನಡ ಸಾಹಿತ್ಯ ಲೋಕ ಮತ್ತು ಜಾನಪದ ಕ್ಷೇತ್ರಕ್ಕೆ ಅಪಾರವಾದ ಸಾಹಿತ್ಯಕ ಕೊಡುಗೆ ನೀಡಿದ್ದು ಬರೆದದ್ದೆಲ್ಲವೂ ಅಮೂಲ್ಯವಾಗಿವೆ. ಕೃಷ್ಣಮೂರ್ತಿ ಹನೂರರು ಕಾದಂಬರಿ, ಕಥಾಸಂಕಲನ, ಕಾವ್ಯ ಸಂಗ್ರಹ, ಲೇಖನ ಸಂಗ್ರಹ, ಅಭಿನಂದನಾ ಗ್ರಂಥಗಳು, ಭಾಷಾಂತರ ಕೃತಿ ಹೀಗೆ ವಿಭಿನ್ನ ಸಾಹಿತ್ಯ ಪ್ರಕಾರಗಳಲ್ಲಿ ತಮ್ಮ ಸಾಹಿತ್ಯ ಕೃಷಿ ಮಾಡಿದ್ದಾರೆ.

ಕೃಷ್ಣಮೂರ್ತಿ ಹನೂರು ಅವರಿಗೆ ಜಾನಪದದೊಂದಿಗೆ ಬಿಡಿಸಲಾಗದ ನಂಟಿದೆ. ಜಾನಪದ ಕ್ಷೇತ್ರದಲ್ಲಿ ಅಪಾರವಾದ ಸೇವೆಯನ್ನು ಸಲ್ಲಿಸಿದ್ದಾರೆ. 'ಲೀಲಾವತಿ–ಪದ್ಮಾವತಿ' ಇವರ ಜನಪದ ಕಥೆಗಳ ಸಂಗ್ರಹವಾಗಿದೆ. 'ಕತ್ತಲ ದಾರಿ ದೂರ' ಇದು ಜನಪದ ಕಥನ ಗೀತೆಗಳ ಸಂಗ್ರಹವಾಗಿದ್ದು (೧೯೮೧), ಕನ್ನಡ ಸಾಹಿತ್ಯ ಪರಿಷತ್ತಿನಿಂದ ಈ ಕೃತಿಗೆ ೨೦೦೩ ರಲ್ಲಿ ಕರ್ನಾಟಕ ಜಾನಪದ ಯಕ್ಷಗಾನ ಪ್ರಶಸ್ತಿ ದೊರೆತಿದೆ. ಮೈಸೂರು, ಕುವೆಂಪು, ಮತ್ತು ಕರ್ನಾಟಕ ವಿಶ್ವವಿದ್ಯಾನಿಲಯದಲ್ಲಿ ಇದು ಪಠ್ಯವಾಗಿತ್ತು. 'ಜನಪದ ವೀರ ಗೀತೆಗಳು' ಇದು ಜನಪದ ಕಾವ್ಯ ಸಂಗ್ರಹವಾಗಿದ್ದು ೧೯೮೭ ಈ ಕೃತಿಗೆ ಕರ್ನಾಟಕ ಜಾನಪದ ಯಕ್ಷಗಾಣ ಪ್ರಶಸ್ತಿ ದೊರೆತಿದೆ.

'ನ್ಯಾಯಗಾರನ ಹೆಂಡತಿ' ಜನಪದ ಕಥಾಸಂಗ್ರಹವಾಗಿದೆ. 'ಮ್ಯಾಸ ಬೇಡರ ಸಂಸ್ಕೃತಿ' ಮ್ಯಾಸ ಬೇಡರನ್ನು ಕುರಿತ ಕೃತಿ ಇದರ ಇಂಗ್ಲೀಷ್ ಅನುವಾದವನ್ನು ಕುಪ್ಪಂನ ದ್ರವಿಡಿಯನ್ ವಿಶ್ವವಿದ್ಯಾನಿಲಯ ಪ್ರಕಟಿಸಿದೆ. 'ಬುಡಕಟ್ಟು ಮತ್ತು ಜನಪದ ಗೀತೆಗಳು' 'ಕರ್ನಾಟಕ ಬುಡಕಟ್ಟುಗಳು' ಪ್ರಸಿದ್ದವಾದ ಕೃತಿಯಾಗಿದ್ದು ಕರ್ನಾಟಕ ಬುಡಕಟ್ಟುಗಳನ್ನು ಕುರಿತಾದ ಎರಡು ಸಂಪುಟಗಳಲ್ಲಿ ಇತರ ವಿದ್ವಾಂಸರೊಂದಿಗೆ ಸಂಪಾದಿಸಿದ್ದಾರೆ. ಇದು ಬುಡಕಟ್ಟು ಅಧ್ಯಯನ ಕೈಗೊಳ್ಳುವವರಿಗೆ ಉತ್ತಮ ಕೈಪಿಡಿಯಾಗಿದೆ. 'ಸುವರ್ಣ ಜಾನಪದ' ಸಹ ಸಂಪಾದಕರೊಂದಿಗೆ ೮೦ ವರ್ಷಗಳಲ್ಲಿ ವಿವಿಧ ಸಂಶೋಧಕರು ಬರೆದಿರುವ ಜಾನಪದ ಲೇಖನಗಳ ಸಂಗ್ರಹವಾಗಿದೆ. 'ಜಾನಪದ ಸಿದ್ಧಾಂತಗಳು' ಜಾನಪದ ಅಧ್ಯಯನ ಮಾಡುವವರಿಗೆ ಉತ್ತಮ ಕೃತಿಯಾಗಿದೆ. 'ಸಾವಿರದ ಸಿರಿ ಬೆಳಗು' (ಬುಡಕಟ್ಟು ಮಹಿಳೆ ಸಿರಿಯಜ್ಜಿ ಹಾಡಿದ ಜನಪದ ಕಾವ್ಯ ಸಂಗ್ರಹ). 'ಐತಿಹಾಸಿಕ ಕಥನ ಗೀತೆಗಳು' ಸಂಪಾದಿತ ಐತಿಹಾಸಿಕ ಜನಪದ ಕಾವ್ಯ ಸಂಗ್ರಹವಾಗಿದೆ. 'ಜನಪದ ಮಹಾಕಾವ್ಯಗಳು' ಇದು ಶಾಸ್ತ್ರೀಯ ಭಾಷಾ ಯೋಜನೆಯಲ್ಲಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಿಂದ ಪ್ರಕಟಿತ ಕೃತಿಯಾಗಿದೆ. 'ಜನಪದ ಸಾಹಿತ್ಯ ಸಂಗ್ರಹ ಮತ್ತು ಅಧ್ಯಯನ' ಜಾನಪದ ಅಧ್ಯಯನ ಆಕಾಂಕ್ಷಿಗಳಿಗೆ ಉತ್ತಮ ಮಾರ್ಗದರ್ಶನ ನೀಡುತ್ತದೆ.

ಇವರು ಅನೇಕ ಲೇಖಕರ ಜೀವನ ಸಾಧನೆಯನ್ನು ಕುರಿತು ಕೃತಿ ರಚಿಸಿದ್ದಾರೆ. 'ಇದು ಎಂತ ಜೀವನವಯ್ಯ' (ಬೆಳಗೆರೆ ಚಂದ್ರಶೇಖರ ಶಾಸ್ತ್ರಿಗಳನ್ನು ಕುರಿತಾದ ಲೇಖನ, ೨೦೦೫), 'ಚಿನ್ಮಯ' (ಬೆಳಗೆರೆ ಕೃಷ್ಣಶಾಸ್ತ್ರಿ ಅಭಿನಂದನ ಗ್ರಂಥ, ೧೯೭೮), 'ಕರ್ನಾಟಕದ ಅರಸು' ಇದು ಸಂಪಾದನಾ ಕೃತಿಯಾಗಿದ್ದು ಕರ್ನಾಟಕದ ಮಾಜಿ ಮುಖ್ಯಮಂತ್ರಿ ದೇವರಾಜ ಅರಸು ಕುರಿತ ಲೇಖನಗಳ ಸಂಗ್ರಹವಾಗಿದೆ. 'ಬಿ. ಪುಟ್ಟಸ್ವಾಮಯ್ಯ' ಬಿ, ಪುಟ್ಟಸ್ವಾಮಯ್ಯ ಅವರ ಜೀವನ ಸಾಧನೆಯನ್ನು ಕುರಿತ ಕೃತಿ (೨೦೦೬) 'ಗೆಂಡಗಯ್ಯ ಒಳವು' ಕೆ. ಎನ್. ಶಿವತೀರ್ಥನ್ ಕಾವ್ಯ ಕುರಿತು ಲೇಖನ ಸಂಗ್ರಹ. 'ದೇವ ಸಾಹಿತ್ಯ' ಡಾ. ರಾಮಚಂದ್ರ ದೇವ ಕುರಿತ ಲೇಖನ ಸಂಗ್ರಹವಾಗಿದೆ.

ಹನೂರರು ಕಾದಂಬರಿ ಕ್ಷೇತ್ರದಲ್ಲಿ ಅಪಾರವಾದ ಸಾಹಿತ್ಯ ಸೇವೆ ಸಲ್ಲಿಸಿದ್ದಾರೆ. ಇವರ ಕಾದಂಬರಿಗಳು ತುಂಬ ಪ್ರಸಿದ್ಧಿಯನ್ನು ಪಡೆದುಕೊಂಡಿವೆ. 'ಬಾರೊ ಗೀಜಗನೆ' (೧೯೮೫) ಅಭಿಮಾನಿ ವಾರಪತ್ರಿಕೆಯ ಪ್ರಶಸ್ತಿ ಲಭಿಸಿದ ಕಾದಂಬರಿಯಾಗಿದೆ. ಇವರ 'ನಿಕ್ಷೇಪ' (೧೯೯೮) ಕಾದಂಬರಿಯು ಪ್ರಸಿದ್ಧವಾಗಿದ್ದು ಇದು ಮೈಸೂರು ವಿಶ್ವವಿದ್ಯಾನಿಲಯದ ಪ್ರಥಮ ಬಿ.ಎ., ಬಿ.ಎಸ್.ಸಿ., ಬಿ.ಕಾಂ., ವಿದ್ಯಾರ್ಥಿಗಳಿಗೆ ಪಠ್ಯವಾಗಿತ್ತು ಮತ್ತು ಪ್ರಜಾವಾಣಿಯ ಸಾಪ್ತಾಹಿಕ ಪುರವಣಿಯಲ್ಲಿ ಒಂದು ವರ್ಷ ಕಾಲ ಪ್ರಕಟವಾಯಿತು. ನಂತರ ಪೂರ್ಣಿಮಾ ಪ್ರೊಡಕ್ಷನ್‌ನಲ್ಲಿ ದೂರದರ್ಶನದಲ್ಲಿ ಧಾರಾವಾಹಿಯಾಗಿ ಪ್ರಸಾರಗೊಂಡು ಹೆಚ್ಚು ಜನಪ್ರಿಯತೆಯನ್ನು ಪಡೆಯಿತು. ತಮಿಳುನಾಡಿನ ಜೀವನಕ್ರಮವನ್ನು, ಸಂಸ್ಕೃತಿಯನ್ನು ಆಧರಿಸಿ ನಿಕ್ಷೇಪ ಕಾದಂಬರಿಯನ್ನು ರಚಿಸಿದ್ದಾರೆ. ವಿಮರ್ಶಕರ ಮೆಚ್ಚಿಗೆಗೆ ಪಾತ್ರವಾದ ಕಾದಂಬರಿ ಇದಾಗಿದೆ. 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಇತ್ತೀಚಿಗೆ ತುಂಬಾ ಜನಪ್ರಿಯವಾದ ಅವರ ಪ್ರಸಿದ್ಧ ಕಾದಂಬರಿಯಾಗಿದೆ.

'ನ್ಯಾಯಗಾರನ ಹೆಂಡತಿ' (ಜನಪದ ಕಥಾಸಂಗ್ರಹ ೧೯೮೮), 'ಕೇರಿಗೆ ಬಂದ ಹೋರಿ' (೧೯೯೦), 'ಕತ್ತಲಲ್ಲಿ ಕಂಡ ಮುಖ' (೨೦೦೨), 'ಸುವರ್ಣ ಕಥಾಸಂಕಲನ' (ಸಣ್ಣ ಕಥೆಗಳ ಸಂಪಾದಿತ ಸಂಕಲನ), 'ಕಳೆದ ಮಂಗಳವಾರ ಮುಸ್ಸಂಜೆ' ಕೃಷ್ಣಮೂರ್ತಿ ಹನೂರರ ಕಥಾಸಂಕಲನ ಕೃತಿಗಳಾಗಿವೆ.

'ಹಾದಿಯೊಳಗನ ಜ್ಯೋತಿ' ಪ್ರವಾಸಿ ಕಥನವಾಗಿದ್ದು ಇದಕ್ಕೆ ೨೦೦೮ರಲ್ಲಿ ವರ್ಧಮಾನ ಪ್ರಶಸ್ತಿ ಮತ್ತು ಚಿನ್ನದ ಪದಕ ದೊರೆತಿದೆ.

ಸಂಶೋಧನಾ ಕ್ಷೇತ್ರದಲ್ಲಿ ಅಪಾರವಾದ ಸೇವೆ ಸಲ್ಲಿಸಿದ್ದಾರೆ. 'ನುಡಿಶೋಧ' ಅವರ ಸಂಶೋಧನಾ ಲೇಖನಗಳ ಸಂಗ್ರಹವಾಗಿದೆ.

'ಕನ್ನಡದಲ್ಲಿ ಅನ್ಯದೇಶ್ಯ ಪದಗಳು' (೨೦೧೦) ಇದು ಶಾಸ್ತ್ರೀಯ ಭಾಷಾ ಯೋಜನೆಯಡಿಯಲ್ಲಿ ಕರ್ನಾಟಕ ರಾಜ್ಯ ಮುಕ್ತ ವಿಶ್ವವಿದ್ಯಾನಿಲಯದಿಂದ ಮೂಡಿ ಬಂದಿದೆ.

'ಗಿರೀಶ್‌ಕಾರ್ನಾಡರ ನಾಟಕಗಳು : ಕನ್ನಡದ ಪ್ರತಿಕ್ರಿಯೆ' ಇದು ಗಿರೀಶ್‌ಕಾರ್ನಾಡರ ನಾಟಕಗಳನ್ನು ಕುರಿತ ವಿವಿಧ ಲೇಖಕರ ವಿಮರ್ಶಾ ಸಂಕಲನವಾಗಿದೆ.

ಹನೂರರು ಭಾಷಾಂತರದಲ್ಲಿ ಅಪಾರ ಸೇವೆ ಸಲ್ಲಿಸಿದ್ದು 'ಉ. ವೇ. ಸ್ವಾಮಿನಾಥ ಅಯ್ಯರ್' ಇದು ಅವರ ಇಂಗ್ಲಿಷ್‌ನಿಂದ ಕನ್ನಡಕ್ಕೆ ಭಾಷಾಂತರವಾದ ಕೃತಿಯಾಗಿದೆ.

ಕೃಷ್ಣಮೂರ್ತಿ ಹನೂರರು ಇಂಗ್ಲೀಷ್ ಸಾಹಿತ್ಯ ರಚನೆ ಮತ್ತು ಭಾಷಾಂತರದಲ್ಲೂ ಅಪಾರ ಸೇವೆ ಸಲ್ಲಿಸಿದ್ದಾರೆ. 'Visage in the Dark and Other stories' ಮತ್ತು 'Myasa Beda' ಇದು ಕನ್ನಡದಿಂದ ಇಂಗ್ಲೀಷ್‌ಗೆ ಭಾಷಾಂತರಗೊಂಡ ಹನೂರರ ಕೃತಿಯಾಗಿದ್ದು, 'Myasa

Beda' ಇದು ಆಂದ್ರಪ್ರದೇಶದ ಕುಪ್ಪಂನ ದ್ರಾವಿಡಿಯನ್ ವಿಶ್ವವಿದ್ಯಾನಿಲಯದಲ್ಲಿ ಪ್ರಕಟಣೆಗೊಂಡಿದೆ. 'The Encyclopaedia of Folk culture of karnataka' (೧೯೯೯) ಇದು ಚೆನ್ನೈನ ಇನ್ಸ್ಟಿಟೀವ್ ಆಪ್ ಏಷಿಯನ್ ಸ್ಟಡೀಸ್ ಸಂಸ್ಥೆಯಲ್ಲಿ ಪ್ರಕಟಗೊಂಡಿದೆ.

**ಶೈಕ್ಷಣಿಕ ಸಂಸ್ಥೆಗಳ ಸದಸ್ಯತ್ವ :**

ಕೃಷ್ಣಮೂರ್ತಿ ಹನೂರು ಅವರು ಅನೇಕ ಶೈಕ್ಷಣಿಕ ಸಂಸ್ಥೆಗಳಲ್ಲಿ ಸೇವೆ ಸಲ್ಲಿಸಿದ್ದಾರೆ. ಆ ಮೂಲಕ ಶೈಕ್ಷಣಿಕ ಅಭಿವೃದ್ಧಿಗೆ ತಮ್ಮ ಉತ್ತಮವಾದ ಸಲಹೆ ಸೂಚನೆಗಳನ್ನು ನೀಡಿದ್ದಾರೆ ಮತ್ತು ಶೈಕ್ಷಣಿಕ ಅಭಿವೃದ್ಧಿಗೆ ಸೇವೆ ಸಲ್ಲಿಸಿದ್ದಾರೆ. ಅವುಗಳ ವಿವರ ಕೆಳಕಂಡಂತಿದೆ.

- ಪಠ್ಯ ಪುಸ್ತಕ ತಜ್ಞ ಸಮಿತಿ ಸದಸ್ಯ

  ಪದವಿ ಪೂರ್ವ ಶಿಕ್ಷಣ ಮಂಡಳಿ, ಕರ್ನಾಟಕ ಸರ್ಕಾರ (೧೯೯೭)

- ಪದವಿ ಪಠ್ಯ ಪುಸ್ತಕ ಸಮಿತಿ ಸದಸ್ಯ

  ಮೈಸೂರು ವಿಶ್ವವಿದ್ಯಾನಿಲಯ (೧೯೯೯-೨೦೦೦)

- FOSSILS (ದಕ್ಷಿಣ ಭಾರತೀಯ ಭಾಷೆಗಳ ಜಾನಪದ ಸಂಘ)

  ಏರ್ಪಡಿಸಿದ್ದ ಮೂರು ಹಂತದ ಜಾನಪದ ಅಧ್ಯಯನ ಕಾರ್ಯಗಾರದ ನಿರ್ದೇಶಕ, ೧೮ ದಿನಗಳು ಮೈಸೂರಿನಲ್ಲಿ ೧೨ ದಿನಗಳು ಉಡುಪಿಯಲ್ಲಿ ಹಾಗೂ ೧೦ ದಿನಗಳ ಕಾಲ ಧಾರಾವಾಡದಲ್ಲಿ (೨೦೦೧).

- ಕನಾಟಕ ಜಾನಪದ ಮತ್ತು ಯಕ್ಷಗಾನ ಆಕಾಡಮಿ ಸದಸ್ಯತ್ವ ಬೆಂಗಳೂರು.
  ೨೦೦೧- ೨೦೦೪
- ಕನ್ನಡ ಸಲಹಾ ಸಮಿತಿಯ ಸದಸ್ಯತ್ವ ಕೇಂದ್ರ ಸಾಹಿತ್ಯ ಆಕಾಡಮೆ, ನವದೆಹಲಿ
  (೨೦೦೭, ೨೦೧೨)
- ಕನ್ನಡ ಸಂಸ್ಕೃತಿ ಇಲಾಖೆ ಏರ್ಪಡಿಸಿದ್ದ 'ಐದೆ' ಐದು ದಿನಗಳ ಕಾರ್ಯಗಾರದ ನಿರ್ದೇಶಕ
  ೨೦೦೮
- ಕರ್ನಾಟಕ ಸಾಹಿತ್ಯ ಅಕಾಡಮಿ ಏರ್ಪಡಿಸಿದ್ದ ೫ ದಿನಗಳ ಜಾನಪದ ಅಧ್ಯಯನ ಶಿಬಿರದ ನಿರ್ದೇಶಕ (೨೦೦೮)
- ಕನ್ನಡ ಅಧ್ಯಯನ ಮಂಡಳಿ ಅಧ್ಯಕ್ಷ ಸ್ನಾತಕ ಪದವಿ ಮೈಸೂರು ವಿಶ್ವವಿದ್ಯಾನಿಲಯ

- ಪದವಿ ಪಠ್ಯ ಪುಸ್ತಕ ಸಮಿತಿಯ ಅಧ್ಯಕ್ಷ ಮೈಸೂರು ವಿಶ್ವವಿದ್ಯಾನಿಲಯ (೨೦೧೨)
- ಕರ್ನಾಟಕ ಸರ್ಕಾರದ ಹಿಂದುಳಿದ ವರ್ಗಗಳ ಕಲ್ಯಾಣ ಇಲಾಖೆ ದೇವರಾಜ ಅರಸು ಪ್ರಶಸ್ತಿ ಸಮಿತಿ ಸದಸ್ಯ (೨೦೧೨)
- ಪುಸ್ತಕ ವಿಮರ್ಶೆ ಪ್ರಜಾವಾಣಿ ಕನ್ನಡ ದಿನಪತ್ರಿಕೆಗಳಲ್ಲಿ ನಿಯಮಿತವಾಗಿ ಪುಸ್ತಕ ವಿಮರ್ಶೆ ಮತ್ತು ಲೇಖನ ಬರವಣಿಗೆ ( ೨೦೦೦- ೨೦೧೦)

ಹೀಗೆ ಕನ್ನಡ ಸಾಹಿತ್ಯ ಮತ್ತು ಜಾನಪದದಲ್ಲಿ ಹನೂರರು ಆಸಕ್ತರು. ಪಠ್ಯಪುಸ್ತಕ ಸಮಿತಿ, ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ, ಕನ್ನಡ ಸಲಹಾ ಸಮಿತಿಯ ಸದಸ್ಯರಾಗಿದ್ದರು. ಪ್ರಜಾವಾಣಿಯಲ್ಲಿ ಪುಸ್ತಕ ವಿಮರ್ಶೆ ಮಾಡಿದ್ದಾರೆ. ಹನೂರರು ೩೬ಕ್ಕೂ ಹೆಚ್ಚು ವೈವಿಧ್ಯಮಯ ಕೃತಿಗಳನ್ನು ರಚಿಸಿದ ಕೃಷ್ಣಮೂರ್ತಿ ಹನೂರರ ಬದುಕೇ ಬರಹವಾಗಿದ್ದು ಸಾಹಿತ್ಯ ಸಾಧನೆಯನ್ನೆ ತಮ್ಮ ಜೀವನದ ಉಸಿರಾಗಿಕೊಂಡಿದ್ದಾರೆ.

---------------

**ಅಡಿಟಿಪ್ಪಣಿ**

೧ ನದಿಯಾದ ನೀರ ಬಿಂದು ಡಾ. ಎ.ಆರ್. ಮದನಕುಮಾರ್ ಪು. ೧೦೬

# ಅಧ್ಯಾಯ : ೨

## ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ಚಾರಿತ್ರಿಕ ವಿಚಾರಗಳ ಅಧ್ಯಯನ

ಮಾನವ ಸಂಸ್ಕೃತಿಯ ಮೂಲಸೆಲೆಗಳ ಅನುಭವಗಳಿಗೆ ಅರ್ಥಗಳನ್ನು ಅರಸುತ್ತಾ ವಿಭಿನ್ನ ಕಾಲಘಟ್ಟದ ಸನ್ನಿವೇಶಗಳಿಗೆ ಪ್ರತಿಕ್ರಿಯಿಸುವ ಪರಿ ಇಲ್ಲಿ ಬಹು ಹೃದ್ಯವಾಗಿದೆ. ಅಪಾರವಾದ ಅನುಭವ ಸಂಪತ್ತಿನಿಂದ ವಿಚಾರ ಸಂಪತ್ತಿನಿಂದ ಪ್ರಸ್ತುತ ಕಾದಂಬರಿ ಕಂಗೊಳಿಸುತ್ತದೆ. ಏಕಕಾಲಕ್ಕೆ ಐತಿಹಾಸಿಕವೂ ಜಾನಪದವೂ ಆಗಿ ಕಾಡುವ ಈ ಕಾದಂಬರಿ ಬಹು ಆಯಾಮ ಹೊಂದಿದೆ. [೧]"ಜನರಲ್ಲಿ ಉಳಿದು ಬೆಳೆದಿರುವ ಕತೆಗಳಿಂದ ಚರಿತ್ರೆಯ ಗುಣಗಳನ್ನು ಕಾಣುವುದು ಒಂದು ಕ್ರಮ. ನಾನಾ ದಾಖಲೆಗಳನ್ನು ಪರೀಕ್ಷಿಸುತ್ತಾ ಹೋದಂತೆ ಚರಿತ್ರೆ ಪುರಾಣ ರೂಪ ಪಡೆಯುವಂತಿದ್ದರೆ ಅಲ್ಲಿ ಚರಿತ್ರೆಯ ನಿಜರೂಪವನ್ನು ಊಹಿಸಲು ಸೃಜನಶೀಲ ಕಲ್ಪನೆಗೂ ಸಾಧ್ಯವಿದೆ."[೧]

ಸಿಂಹಾಸನದ ಇತಿಹಾಸಕ್ಕಿಂತ ಗ್ರಾಮಚರಿತ್ರೆಯನ್ನು ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿ ಅನಾವರಣಗೊಳಿಸುತ್ತದೆ. ರಾಜಸತ್ತೆಯ ಅರಮನೆಕೇಂದ್ರಿತ ರಾಜಕಾರಣದಲ್ಲಿ ಇದು ಅವ್ಯಕ್ತವಾಗದೆ ಉಳಿದಿರುವ ವಿವಿಧ ಬಗೆಯ ಸತ್ಯಗಳನ್ನು ಇಲ್ಲಿ ಬೆಳಕಿಗೆ ತರಲಾಗಿದೆ. ಚಾರಿತ್ರಿಕ ವಸ್ತುವನ್ನು ಹೆಕ್ಕಿಕೊಂಡು ಅದನ್ನು ಜನಸಾಮಾನ್ಯರ ನೆಲೆಯಿಂದ ತರುವ ಕಲಾತ್ಮಕ ಪ್ರಯತ್ನ ಇಲ್ಲಿದೆ. ಇದನ್ನು ಶುದ್ಧ ಚಾರಿತ್ರಿಕ ಕಾದಂಬರಿ ಎನ್ನಲಾಗದಿದ್ದರೂ ಶ್ರೀಸಾಮಾನ್ಯನ ನೆಲೆಯಿಂದ ಇತಿಹಾಸ ಅವಲೋಕಿಸುವ, ಮರುಚಿಂತನೆಗೊಳಪಡಿಸುವ ಪ್ರಯತ್ನ ಇಲ್ಲಿದೆ.

ಉಳ್ಳವರ ಕತೆಯಾದ ಇತಿಹಾಸ, ಅರಮನೆಯ ವೈಭವ, ಯುದ್ಧದ ಪರಾಕ್ರಮಗಳ ಕಥನ. ಇತಿಹಾಸದ ಪ್ರಜ್ಞೆಯುಳ್ಳ ಹನೂರರ ಜಾನಪದದ ಅಧ್ಯಯನ ಇತಿಹಾಸವನ್ನು ಹೊಸ ದೃಷ್ಟಿಯಲ್ಲಿ ನೋಡುವ ಶಕ್ತಿ ನೀಡಿದೆ. ಬಹುಮುಖ ಆಯಾಮ ಪಡೆದ ಟಿಪ್ಪುವಿನ ಕಾಲದ ಕಥೆಯ ಈ ಕೃತಿ ಟಿಪ್ಪುವಿನ ಸಿಂಹಾಸನದ, ಅವನ ಏಳುಬೀಳಿನ ಇತಿಹಾಸವಲ್ಲ. ಶ್ರೀಸಾಮಾನ್ಯರ ಚರಿತ್ರೆಯನ್ನು ಅನಾವರಣಗೊಳಿಸುವಲ್ಲಿ ರಾಜಸತ್ತೆಯ ಅರಮನೆಯಲ್ಲಿ ಕಥೆ ಕೇಂದ್ರೀಕೃತವಾಗದೆ ಉಳಿದಿರುವ ವಿವಿಧಬಗೆಯ ಚಾರಿತ್ರಿಕ ಸತ್ಯಗಳನ್ನು ಬೆಳಕಿಗೆ ತಂದಿದೆ. ಶುದ್ಧ ಚಾರಿತ್ರಿಕ ಕಾದಂಬರಿಯಲ್ಲದಿದ್ದರೂ, ಶ್ರೀಸಾಮಾನ್ಯನ ನೆಲೆಯಿಂದ ಇತಿಹಾಸ ಅವಲೋಕಿಸಿವ ಪ್ರಯತ್ನದಲ್ಲಿ ಟಿಪ್ಪು, ಹೈದರ್, ಅರಮನೆ ಶ್ರೀರಂಗಪಟ್ಟಣದ ಪರಿಸರಗಳ ಮೂಲಕ ಹನೂರರು ಕಟ್ಟಿಕೊಟ್ಟಿರುವ ಜಗತ್ತೆ ಬೇರೆ. ಇದು ಅರಮನೆ, ಸುಲ್ತಾನರೊಡನೆ ಸಂಬಂಧವಿದ್ದ ಸಾಮಾನ್ಯ ವ್ಯಕ್ತಿಯಾದ ದಳವಾಯಿಯ ಆತ್ಮಕಥೆ. ಆದ್ದರಿಂದ ಕಾಂಬರಿಯಲ್ಲಿ ಟಿಪ್ಪು-ಹೈದರ್ ಗೌಣವಾಗಿ ಬರುತ್ತಾರೆ.

ಸಾಮಾನ್ಯನೊಬ್ಬ ಅರಮನೆಯನ್ನು ಅವಲೋಕಿಸುವ ಕಥೆಯಲ್ಲಿ ಅರಮನೆಯ ಭೋಗಕ್ಕೆ, ರಾಜಕೀಯ ದಬ್ಬಾಳಿಕೆಗೆ ಬಲಿಯಾದ ಜನಸಾಮಾನ್ಯರ ಬದುಕಿನ ಬವಣೆಗಳ ಚರಿತ್ರೆ ಈ ಕೃತಿಯ ಚಾರಿತ್ರಿಕ ವಿಚಾರಗಳಾಗಿವೆ. ಕಾದಂಬರಿಯ ಆರಂಭದಲ್ಲಿ ಕಾವೇರಿಪುರದ ನಾಮವೈಶಿಷ್ಟ್ಯವನ್ನು ವಿವರಿಸಿದ್ದಾರೆ. ಮತ್ತು ವೀರಗಲ್ಲಿನಲ್ಲಿ ನಮೂದಿಸಿರುವ ಕುದುರೆದೇಶಿಗಯ್ಯಗಳು ಸನ್ ಸಾವಿರದ ಏಳುನೂರ ತೊಂಬತ್ತೊಂಬತ್ತು ಸರ್ವಜಿತು ಸಂವತ್ಸರ ಶುಭ ಸುಕ್ರವಾರದಲು ದೇವರ ಪಾದ ಸೇರಿದರು ಎಂದು ನಮೂದಿಸಿದೆ. ಇದು ಟಿಪ್ಪುಸುಲ್ತಾನನ ಅಂತ್ಯದ ಕಾಲವೂ ಆಗಿದ್ದು, ಕುದುರೆ ದೇಶಿಗಯ್ಯಗಳ ಕೊನೆಯನ್ನು ಶಾಸನದಲ್ಲಿ ಕೆತ್ತಿರುವುದರಿಂದ ಇದೊಂದು ಐತಿಹಾಸಿಕ ಘಟನೆಯಾಗಿ ಕಾಣಲಾಗಿದೆ.ನಂತರ ಕಾದಂಬರಿ ರಚನೆಯ ಮೂಲವನ್ನು ಕುರಿತು ತಿಳಿಸಿದ್ದಾರೆ. ಕುದುರೆದೇಶಿಗಯ್ಯ ರಚಿಸಿದ ಆತ್ಮಚರಿತ್ರೆ ಗಮಕದ ಗಣಪಯ್ಯನಿಂದ ಅಲ್ಪಸ್ವಲ್ಪ ಮಾರ್ಪಾಡಿನೊಂದಿಗೆ ರೂಪಿಸಲ್ಪಟ್ಟ ಧಫ್ತರು. ಅದು ಸುಲೇಮಾನ್ ಸಾಬರ ಮನೆಯಲ್ಲಿ ದೊರಕಿ ಈಗ ಕಾದಂಬರಿಯಾಗಿ ರಚನೆಗೊಂಡಿದೆ ಎಂದು ಕಾದಂಬರಿಕಾರರು ತಿಳಿಸಿದ್ದಾರೆ.

[1]"ವಿದ್ವಾಂಸರ ಬರಹಗಾರರ ಇತಿಹಾಸಕಾರರ ಮತ್ತು ಬುದ್ಧಿಜೀವಿಗಳ ನಡುವೆ ಚರ್ಚಿತವಾಗಿರುವ ಹೈದರ್–ಟಿಪ್ಪು ಯುಗದ ಕಥಾಹಂದರವನ್ನು ಹೊಂದಿರುವ ಈ ಕೃತಿ ಆ ಚರ್ಚೆಗಳ ವಿಷಯಗಳಿಂದ ದೂರ ಉಳಿದು ಅವುಗಳಲ್ಲಿ ಯಾವುದೂ ಎತ್ತದ ಮಾನವೀಯ ಪ್ರಶ್ನೆಗಳನ್ನು ಹೈದರ್–ಟಿಪ್ಪು ವ್ಯಕ್ತಿತ್ವಗಳ ಬಗ್ಗೆ ಇಲ್ಲಿವರೆಗೆ ಬಂದಿರುವ ಎಲ್ಲ ಸೃಜನೇತರ ಬರಹಗಳಿಗಿಂತ ಭಿನ್ನದಾರಿಯನ್ನು ಈ ಕೃತಿ ತುಳಿದಿದೆ."[1] ಎಂದು ಎಚ್.ಎಸ್.ಶಿವಪ್ರಕಾಶ್‌ರವರು ಈ ಕಾದಂಬರಿಯ ಚಾರಿತ್ರಿಕ ಸಂಗತಿಗಳ ವೈಶಿಷ್ಟ್ಯತೆಯ ಬಗ್ಗೆ ಪ್ರತಿಕ್ರಿಯಿಸಿದ್ದಾರೆ. 'ಅಜ್ಞಾನನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ಶ್ರೀರಂಗಪಟ್ಟಣವನ್ನಾಳಿದ ಹೈದರಾಲಿ ಮತ್ತು ಟಿಪ್ಪುವಿನ ಚರಿತ್ರೆಯೂ ಮೂಡಿ ಬಂದಿದೆ. ಪ್ರಸ್ತುತ ಕಾದಂಬರಿಯ ಮುಖ್ಯ ವಿಷಯ ದಳವಾಯಿಯ ಆತ್ಮವೃತ್ತಾಂತವನ್ನು ಹೇಳುವುದಾಗಿರುವುದರಿಂದ ಈ ಇಬ್ಬರ ಚಾರಿತ್ರಿಕ ವಿಷಯಗಳಿಗೆ ಅಷ್ಟು ಮಾನ್ಯತೆಯಿಲ್ಲ. ಆದರೂ ದಳವಾಯಿ ಜೀವನ ವಿಚಾರವನ್ನು ಹೇಳುವುದರೊಂದಿಗೆ ಇವರ ಚಾರಿತ್ರಿಕ ಸಂಗತಿಗಳು ಒಟ್ಟಾಗಿಯೇ ಮೂಡಿಬಂದಿದೆ.

**ಹೈದರಾಲಿಯ ಚಾರಿತ್ರಿಕ ವಿಚಾರ :**

ಹೈದರಾಲಿ ಶ್ರೀರಂಗಪಟ್ಟಣನ್ನಾಳಿದ ಚಾರಿತ್ರಿಕ ಪುರುಷ. ಈತನಿಗೆ ಸಂಬಂಧಿಸಿದ ಸಂಗತಿಗಳು ಕಾದಂಬರಿಯಲ್ಲಿ ಬರುತ್ತದೆ. ಹೈದರಾಲಿ ಮೈಸೂರು ಸಂಸ್ಥಾನದ ದಳವಾಯಿ ನಂಜರಾಜಯ್ಯನಿಂದ ಪ್ರವರ್ಧಮಾನಕ್ಕೆ ಬಂದು ನಂತರ ಚಿಕ್ಕದೇವರಾಜ ಪಡೆಯರ ಆಣತಿಯಂತೆ ನಂಜರಾಜಯ್ಯನಿಗೆ ನಂಜು ಉಣಿಸಿ ಚಿಕ್ಕದೇವರಾಜ ಒಡೆಯರ ದಳಪತಿಯಾಗಿ ನಂತರ ಸ್ವತಂತ್ರನಾದ ವ್ಯಕ್ತಿ. ಈತ ಬ್ರಿಟಿಷರೊಡನೆ ಹೋರಾಡಿ ಎರಡು ಆಂಗ್ಲೋ ಮೈಸೂರು ಯುದ್ಧಗಳನ್ನು ಎದುರಿಸಿದವನು

ಮೊದಲನೆ ಆಂಗ್ಲೋ ಮೈಸೂರು ಯುದ್ಧದಲ್ಲಿ ಬ್ರಿಟಿಷರನ್ನು ಸೋಲಿಸಿ ಅವರಿಗೆ ಅವಮಾನಕಾರಿಯಾದ 'ಮೈಸೂರು ಒಪ್ಪಂದ' ಮಾಡಿಕೊಂಡಿದ್ದವನು.

ಈತನ ದಿಗ್ವಿಜಯಕ್ಕೆ ಸಂಬಂಧಿಸಿದ ಮಾಹಿತಿಗಳು ಕಾದಂಬರಿಯಲ್ಲಿ ಹೇರಳವಾಗಿದೆ. ಹೈದರಾಲಿಯು ಚಿತ್ರದುರ್ಗದ ಮೇಲೆ ಅಕ್ರಮಣ ಮಾಡಿದ ಪ್ರಸಂಗ ಕಾದಂಬರಿಯಲ್ಲಿದೆ. ಎಷ್ಟೆ ಪ್ರಯತ್ನ ಮಾಡಿದರೂ ಚಿತ್ರದುರ್ಗ ಕೋಟೆಯನ್ನು ಬೇಧಿಸಲಾಗದೆ ಕೊನೆಗೆ ಅಲ್ಲಿಯ ರಾಜನಾದ ಮದಕರಿನಾಯಕರೊಂದಿಗೆ ಸಂಧಾನ ಮಾಡಿಕೊಂಡನು. ಸೌಹಾರ್ದಕ್ಕಾಗಿ ತಿಪ್ಪೇಸ್ವಾಮಿಯವರ ಸಮಾಧಿ ಮಂದಿರ ಕಟ್ಟಿಸಿ ಸಂತರ ಸೇವೆ ಮಾಡಿಸಿದನು.

ಹೈದರಾಲಿಯು ಬಿದನೂರಿನ ವಿಜಯದ ನಂತರ ಮದಕರಿನಾಯಕನನ್ನು ಸೆರೆಯಲ್ಲಿರಿಸಿ ಚಿತ್ರದುರ್ಗವನ್ನು ವಶಪಡಿಸಿಕೊಂಡನು. ಬಿದನೂರಿನ ಚೆನ್ನಬಸವಯ್ಯನ ಮಲತಾಯಿ ರಾಣಿ ಚೆನ್ನಮ್ಮಾಜಿ ತನ್ನ ಪ್ರಿಯಕರನಾದ ನಿಂಬಯ್ಯನೊಂದಿಗೆ ಸೇರಿ ರಾಜ್ಯಭಾರ ಮಾಡುತ್ತಿದ್ದು, ಹೈದರಾಲಿ ಚಿತ್ರದುರ್ಗಕ್ಕೆ ಆಕ್ರಮಣ ಮಾಡಿದಾಗ ಚೆನ್ನಬಸವಯ್ಯ ಹೈದರಾಲಿಯನ್ನು ಬಿದನೂರಿನ ಮೇಲೆ ಆಕ್ರಮಣ ಮಾಡಿ ತನಗೆ ಅಧಿಕಾರ ಕೊಡಿಸಿಕೊಡಬೇಕೆಂದು ಕೇಳಿಕೊಳ್ಳುತ್ತಾನೆ. ಹೈದರಾಲಿ ಬಿದನೂರನ್ನು ಗೆದ್ದುಕೊಂಡು ರಾಣಿ ಚೆನ್ನಮಾಜಿ, ಅವಳ ಪ್ರಿಯಕರ ನಿಂಬಯ್ಯ ಹಾಗೂ ಚೆನ್ನಬಸವಯ್ಯನನ್ನೂ ಸೆರೆಯಲ್ಲಿಸಿ ತಾನೇ ಸಾಮ್ರಾಜ್ಯ ವಶಪಡಿಸಿಕೊಳ್ಳುತ್ತಾನೆ. ಹಾಗೆಯೇ ತನ್ನ ರಾಜಧಾನಿಯನ್ನು ಬಿದನೂರಿಗೆ ವರ್ಗಾಯಿಸುವ ಆಲೋಚನೆಯನ್ನು ಮಾಡುತ್ತಾನೆ. ಬಿದನೂರಿನ ಆಕ್ರಮಣದ ಮಾರ್ಗ ಮದ್ಯದಲ್ಲಿ ಸಿರಿ ಸಂಪತ್ತಿನಿಂದ ಕೂಡಿದ ಶಿವಮೊಗ್ಗೆಯನ್ನೂ ಹೈದರಾಲಿ ಆಕ್ರಮಿಸಿಕೊಳ್ಳುತಾನೆ. ಚಿತ್ತೂರಿನ ಯುದ್ಧದಲ್ಲಿ ನರಸಿಂಗಾಪೇಟೆಯಲ್ಲಿ ಹೈದರಾಲಿ ಗಾಯಗೊಂಡು ಕೊನೆಯುಸಿರೆಳೆಯುತ್ತಾನೆ.

ಪ್ರಸ್ತುತ ಕಾದಂಬರಿಯಲ್ಲಿ ಹೈದರಾಲಿ ಚಿತ್ತೂರಿನ ನರಸಿಂಗಾಪೇಟೆಯಲ್ಲಿ ಗಾಯಗೊಂಡು ಸಾಯುವ ಸ್ಥಿತಿಯಲ್ಲಿದ್ದಾಗ ತನ್ನ ಮಗನಾದ ಟಿಪ್ಪುವಿಗೆ ಒಂದು ಕಾಗದ ಬರೆಸುತ್ತಾನೆ. ಇದು ಕಾದಂಬರಿಯಲ್ಲಿ ಪ್ರಮುಖವಾಗಿದೆ. 'ರಣರಂಗದ ಬಿಡಾರದಿಂದ ಈ ಪತ್ರ ಬರೆಯಿಸುತ್ತಿದ್ದೇನೆ. ನಾನು ಕಟ್ಟಿದ ಈ ಸಾಮ್ರಾಜ್ಯದ ಗಡಿಯನ್ನು ಕಾವೇರಿ ತುಂಗ ಭದ್ರೆಯರೇ ಕಾಪಾಡಬೇಕು. ನಿನ್ನನ್ನೂ ರಕ್ಷಿಸಬೇಕು. ನನಗೆ ಏಳು ವರ್ಷ ತುಂಬುವ ಹೊತ್ತಿಗೆ ನನ್ನ ತಂದೆ ಜೀವ ತುಂಬಿಸಿಕೊಂಡು ಹೋದರು. ಹೆತ್ತ ತಾಯಿ ನನ್ನ ಹೊತ್ತುಕೊಂಡು ಅವಳ ಅಣ್ಣನನ್ನು ಹುಡುಕಿ ತಿರುಗಿದಳು. ಊರು ತಿರುಗುವವರಿಗೆ ಅಕ್ಷರ ಜ್ಞಾನ ಎಲ್ಲಿಂದ ಬರಬೇಕು. ವಿಧಿಯ ಆಟ ದೊಡ್ಡದು. ನನ್ನಂಥವನನ್ನೂ ಅರಮನೆಯ ಮುಂದೆ ಕರೆದು ಕೊಂಡು ಹೋಗಿ ಕುದುರೆ ಬೆನ್ನು ಹತ್ತಿಸಿತು. ಕುದುರೆ ಬೆನ್ನು ಹತ್ತಿದ ಮೇಲೆ ಸವಾರಿಯಲ್ಲಿ ದೇಹ ಕುಲುಕಿ ಮೈ ಮೆತ್ತಗಾಗುವುದೆ? ಕುದುರೆ ಏರುವುದರ ಅವಕಾಶ ಸಿಕ್ಕಿದ್ದು ಮೈಸೂರು ಸೀಮೆಯ ದಳವಾಯಿ ನಂಜರಾಜಯ್ಯನಿಂದ

ಚಿಕ್ಕದೇವರಾಜ ಒಡೆಯರ ಆಜ್ಞೆಯಂತೆ ದಳವಾಯಿ ನಂಜರಾಜಯ್ಯನಿಗೆ ನಂಜು ಉಣಿಸಿಬಿಟ್ಟೆ, ರಾಜಕಾರಣದಲ್ಲಿ ಸ್ನೇಹ ಕೃತಜ್ಞತೆ ಎಲ್ಲಿಯದು? ಆಮೇಲೆ ನನ್ನ ಯುದ್ಧ ಪ್ರಯಾಣ ಒಂದೇ ಎರಡೇ. ಬಿದನೂರು, ಚಿತ್ರದುರ್ಗ ಕೌಲೇದುರ್ಗ, ಬಲ್ಲಾಳದುರ್ಗ, ಮಂಗಳೂರು ಈ ಎಲ್ಲಾ ಸೀಮೆಗಳೂ ನನ್ನ ಯುದ್ಧ ಬಿಡಾರಗಳು. ಕಾವೇರಿಯಿಂದ ಹೊರಟವನು ತುಂಗೆಯ ತಡಿಯಲ್ಲಿ ನಿಂತೆ. ಅರಮನೆ ಕಟ್ಟಲು ಹೋದ ನಾನು ಅಲ್ಲಿ ಉಳಿದದ್ದೆ ಅಲ್ಪಕಾಲ ಮಾತ್ರ, ಕುಂಪಣಿಯವರ ಸ್ನೇಹ ಸಂಬಂಧವೇ ನನ್ನ ಬಲ ಎಂದು ತಿಳಿದಿದ್ದೆ, ನಿಜ ಶತ್ರುಗಳ ವಿರುದ್ಧ, ಪ್ರಾಮಾಣಿಕರ ಎದುರು ಹೊಡೆದಾಟ ಸುಲಭ. ಆದರೆ ಕುತಂತ್ರ ಬೆರೆತ ಅಪ್ರಾಮಾಣಿಕರ ಎದುರು ಹೋರಾಟ ಕಡುಕಷ್ಟ, ಕುಂಪಣಿಯವರೊಡನೆ ಸಂಧಾನ ಬೆಳೆಸುವುದೇ ವ್ಯರ್ಥ. ನೀನೂ ಯೋಚಿಸು. ಹೋಗಲಿ ಈ ವಿದೇಶಿಯರ ಎದುರು ನೀನು ದೇಶಿಯರ ಗುಂಪು ಕಟ್ಟೆ ಬಲ್ಲೆಯಾ? ಹೈದರಾಬಾದಿನ ನಿಜಾಮ, ಗಾಯಕವಾಡದ ಸಿಂಧ್ಯಾ, ನಾಗವಾರದ ಬೋಸ್ಲೆ ಇವರೆಲ್ಲರ ಸ್ನೇಹವನ್ನು ಬಯಸಿದರೆ ಅವರು ನಮ್ಮ ಬುಡವನ್ನೆ ಹಿಡಿದು ಅಲುಗಾಡಿಸಿವರು'. ಎನ್ನುತ್ತಾನೆ. ಇದು ಹೈದರಾಲಿ ಜೀವನ, ಸಾಧನೆ, ವ್ಯಕ್ತಿತ್ವ, ಅವನ ದೇಶಾಭಿಮಾನ, ಕುಂಪಣಿಯವರೊಂದಿಗೆ ಅವನಿಗಿದ್ದ ಸಂಬಂಧದ ಬಗೆ, ಹಾಗೂ ಮಗನ ಮೇಲೆ ಅವನಿದ್ದ ಪ್ರೀತಿ ಮುಂತಾದವುಗಳನ್ನು ಪ್ರತಿಬಿಂಬಿಸುತ್ತದೆ.

**ಟಿಪ್ಪುವಿನ ಚಾರಿತ್ರಿಕ ವಿಚಾರಗಳು :**

ಹೈದಾರಾಲಿಯ ಮಗನಾದ ಟಿಪ್ಪು ಶ್ರೀರಂಗಪಟ್ಟಣವನ್ನಾಳಿದ ಚಾರಿತ್ರಿಕಪುರುಷ. ಬ್ರಿಟೀಷರಿಗೆ ಸಿಂಹಸ್ವಪ್ನವಾಗಿದ್ದು ನಾಲ್ಕು ಆಂಗ್ಲೋ ಮೈಸೂರು ಯುದ್ಧಗಳನ್ನು ಎದುರಿಸಿ ಕುಂಪಣಿಯವರನ್ನು ಈ ದೇಶದಿಂದಲೇ ಹೊರದೂಡಬೇಕೆಂದು ವಿದೇಶದಿಂದ ಸೈನ್ಯ ಸಂಘಟಿಸಿ ಹೋರಾಡಿದ ದೀಮಂತ ನಾಯಕ. ಈ ಮಹನೀಯನ ಚಾರಿತ್ರಿಕ ವಿಚಾರಗಳು ಕಾದಂಬರಿಯಲ್ಲಿ ಹೇರಳವಾಗಿದೆ. ಮುಖ್ಯವಾಗಿ ಈ ಕಾದಂಬರಿಯ ಘಟನೆಗಳು ಟಿಪ್ಪುವಿನ ಕಾಲಮಾನಕ್ಕೆ ಸಂಬಂಧಿಸಿದಂತೆ ನಡೆಯುತ್ತದೆ.

ಕುದುರೆದೇಸಿಗಯ್ಯನು ಮೂರು ಹುಲಿಗಳನ್ನು ಜೀವಂತವಾಗಿ ಸೆರೆಹಿಡಿದು ತಂದನು. ಇದು ಟಿಪ್ಪುವಿನ ಮಹದಾಕಾಂಕ್ಷೆಯಾಗಿದ್ದು ಅವುಗಳನ್ನು ಪ್ರೀತಿಯಿಂದ ಸಲಹುವ ಜವಬ್ದಾರಿಯನ್ನು ದಳವಾಯಿಗೆ ನೀಡುತ್ತಾನೆ. ಇದು ಟಿಪ್ಪು ಸುಲ್ತಾನನಿಗೆ ಹುಲಿಯ ಮೇಲಿದ್ದ ವ್ಯಾಮೋಹವನ್ನು ತಿಳಿಸುತ್ತದೆ ಮತ್ತು ಆಮೇಲೆ ಅವರನ್ನು ಜನ 'ಮೈಸೂರು ಹುಲಿ' ಎಂತಲೇ ಕರೆದರೆಂಬ ಸಂಗತಿಯೂ ಕಾದಂಬರಿಯಲ್ಲಿ ಬಂದಿದೆ.

ಟಿಪ್ಪುವನ್ನು 'ಧರ್ಮಾಂಧ' 'ಮುಸಲ್ಮಾನ ಮತಾಂಧ' 'ಹಿಂದೂ ವಿರೋಧಿ' ಎಂದು ಕರೆಯುವ ವರ್ಗವಿರುವಂತೆ ಅದಕ್ಕೆ ತದ್ವಿರುದ್ದವಾದ ಅವನೊಬ್ಬ 'ದೇಶ ಪ್ರೇಮಿ' 'ಹಿಂದೂಗಳ

ಸ್ನೇಹಿತ' 'ದಕ್ಷಾಡಳಿತಗಾರ' ಎಂದು ಗುರುತಿಸುವ ವರ್ಗವೂ ಇದೆ. ಹನೂರರು ಈ ಎರಡು ಕಡೆಯಲ್ಲಿ ಯಾವೂದೇ ಒಂದು ವರ್ಗದ ಪಕ್ಷವಹಿಸದೆ ಕಾದಂಬರಿ ರಚಿಸಿದ್ದಾರೆ.

ಈ ಕತೆ ನಡೆದ ಕಾಲದಲ್ಲಿ ಚರಿತ್ರೆ ದಾಖಲಿಸದ ಕೆಲವು ಸತ್ಯಗಳು ಇವೆ. ಮಾಹಿತಿ ರೂಪದಲ್ಲಿರುವ ಆ ದಾಖಲೆಗಳನ್ನು ಗಮನಿಸುವುದು ಕೂಡ ಕಾದಂಬರಿಕಾರರ ಸೃಜನಶೀಲ ಮನಸ್ಸು. ೧೭೯೯ ರಲ್ಲಿ ಮಡಿದ ಟಿಪ್ಪುಸುಲ್ತಾನ್ ಜೀವಿಸಿದ್ದು ಅರ್ಧ ಶತಮಾನ ಮಾತ್ರ. ಮೈಸೂರಿನ ಹುಲಿ ಎಂದೇ ಪ್ರಸಿದ್ದನಾಗಿದ್ದ ಆತನ ಕಾಲದಲ್ಲಿ ಹಲವಾರು ಆಡಳಿತ ಸುಧಾರಣೆಗಳು ಜಾರಿಗೆ ಬಂದವು. ಅವುಗಳಲ್ಲಿ ಟಿಪ್ಪು ಕಾಲದ ನಾಣ್ಯ ಹಾಗೂ ಭೂಕಂದಾಯವೂ ಸೇರಿದೆ. ಅವನು ಮೈಸೂರು ಕೃಷಿಯನ್ನು ಹೊಸದಾಗಿ ರೂಪಿಸಿದ. ಆತನ ಕಾಲದ ಉಕ್ಕಿನ ಆಯುಧಗಳು 'ಮೈಸೂರು ರಾಕೆಟ್' ಎಂದೇ ಪರಿಚಿತ. ಆತನಿಗೆ ಕನ್ನಡ, ಹಿಂದಿ, ಪರ್ಶಿಯನ್, ಅರೇಬಿಕ್ ಅಲ್ಲದೆ ಇಂಗ್ಲೀಷ್ ಹಾಗೂ ಪ್ರೆಂಚ್ ಭಾಷೆಗಳ ಪರಿಚಯವೂ ಇತ್ತು ಎನ್ನಲಾಗಿದೆ. ಟಿಪ್ಪು ಕನಸುಗಾರ ಹಾಗೂ ಕಾವ್ಯ ಪ್ರೇಮಿಯೂ ಆಗಿದ್ದನು. ಆತನ ಸೈನ್ಯಕ್ಕೆ ಪ್ರೆಂಚ್ ಸೈನ್ಯದ ತರಬೇತಿ ಸಿಕ್ಕಿತ್ತು. ಟಿಪ್ಪು ರಾಜ್ಯ ಉತ್ತರದಲ್ಲಿ ಕೃಷ್ಣಾನದಿ ದಡದಿಂದ ಪಶ್ಚಿಮಘಟ್ಟ ಹಾಗೂ ಉತ್ತರದಲ್ಲಿ ಅರಬ್ಬಿ ಸಮುದ್ರವರೆಗೆ ವ್ಯಾಪಿಸಿತ್ತು. ಮಂಗಳೂರು ಒಪ್ಪಂದವನ್ನು ಆಂಗ್ಲರು ಮಾನ್ಯ ಮಾಡಲಿಲ್ಲ ಎಂಬ ಕಾರಣಕ್ಕಾಗಿ ಬ್ರಿಟಿಷ್ ಆಶ್ರಯದಲ್ಲಿದ್ದ ಟ್ರಾವಾಂಕೂರ್ ರಾಜನ ಮೇಲೆ ೧೭೮೯ ರಲ್ಲಿ ಟಿಪ್ಪು ನಡೆಸಿದ ದಾಳಿಯಿಂದ ಬ್ರಿಟಿಷರ ಜೊತೆ ವಿರೋಧ ಬಲವಾಯಿತು. ಮರಾಠರು ಹಾಗೂ ಹೈದರಾಬಾದಿನ ನಿಜಾಮನು ಅವನ ವಿರುದ್ದವಿದ್ದರು. ಟಿಪ್ಪು ನಿಷ್ಠಾವಂತ ಮುಸ್ಲಿಮನಾಗಿದ್ದು, ಪ್ರೆಂಚರ ಆಶಯದಂತೆ ಮೈಸೂರಿನಲ್ಲಿ ಚರ್ಚ್ ಕಟ್ಟಿಸಿದ್ದ. ಶ್ರೀರಂಗನಲ್ಲಿ ಟಿಪ್ಪು ಅಪಾರ ಭಕ್ತಿ ಹೊಂದಿದ್ದ. ಸಂಕೀರ್ಣವಾದ ಹಿಂದೂ-ಮುಸ್ಲಿಂ ಸಂಬಂಧ ಹೊಂದಿದ್ದ.

ಭಾರತದ ಅನೇಕ ರಾಜರು ಬ್ರಿಟಿಷರೊಂದಿಗೆ ಸಂಧಾನ ಮಾಡಿಕೊಂಡು ಜೀವ ಮತ್ತು ರಾಜ್ಯದ ಒಂದು ಅಧಿಕಾರವನ್ನು ಉಳಿಸಿಕೊಳ್ಳುತ್ತಿದ್ದ ಕಾಲದಲ್ಲಿ ಟಿಪ್ಪು ಮಡಿದ. ೫೦ ವರ್ಷ ದಾಟಿದ ವಯಸ್ಸಿನ ಬಳಿಕ ಯುದ್ಧ ಮಾಡುವ ಯೌವನದ ಕಾಲವಲ್ಲ ಆದರೂ ಟಿಪ್ಪು ತನ್ನ ೫೦ ನೇ ವಯಸ್ಸಿನಲ್ಲಿ ಯುದ್ದ ಮಾಡಿದ ಅತನ ಕಾಲದಲ್ಲಿ ಮೈಸೂರು ಹೊಸ ಅಡಳಿತದ ಯುಗಕ್ಕೆ ಕಾರಣವಾಗಿತ್ತು.

ಖಾವಂದ್ ಟಿಪ್ಪು ಸುಲ್ತಾನರು ಪರಂಗಿಯವರೊಡನೆ ನಡೆಸಿದ ಕೊನೆಯ ಯುದ್ದದ ಕಾಲ ಸಿಪಾಯಿಗಳೆಲ್ಲ ಹತ್ತಾರು ವರ್ಷ ಕುಂಪಣಿಯವರೊಡನೆ ಹೊಡೆದಾಡಿ ಹೈರಾಣಾಗಿದ್ದರು. ಎಷ್ಟು ಸಂಬಳ ಕೊಟ್ಟರೂ ಕೈಯಲ್ಲಿ ಆಯುಧ ಹಿಡಿಯುವುದಿಲ್ಲ ಎನ್ನುತಿದ್ದರು. ಅನೇಕ ಸಿಪಾಯಿಗಳಿಗೆ ನಾನಾ ಖಾಯಿಲೆ ಅಮರಿಕೊಂಡಿತ್ತು. ಮನೆಯಲ್ಲಿ ಹೆಂಡಂದಿರು ಮೊದಲು ನಮ್ಮ ಎದೆಗೆ ಗುಂಡು ಹಾರಿಸಿ ಮಕ್ಕಳನ್ನೂ ಸಾಯಿಸಿ ಅಲ್ಲಿಂದ ಯಾರ ಮೇಲಾದರೂ ಹೊಡೆದಾಡಲು ಹೋಗಿರೆಂದು

ಬಾಯಿ ಮಾಡುತ್ತಿರುವುದಾಗಿ ಸಿಪಾಯಿಗಳು ಹೇಳುತ್ತಿದ್ದರು. ಯುದ್ಧದ ಸಹವಾಸ ಸಾಕು ಬಿಟ್ಟುಕೊಟ್ಟಲ್ಲಿ ಯಾವುದಾದರೂ ಗುಡಿಗುಂಡಾರ ಮಂಟಪ ಮಸೀದಿಯ ಮುಂದೆ ಭಿಕ್ಷೆ ಬೇಡಿ ಕಾಲ ಮಾಡುತ್ತೇವೆಂದು ಬೇಡುತ್ತಿದ್ದರು. ಇದು ಅಂದಿನ ಕಾಲದಲ್ಲಿ ಸೈನಿಕರಿಗೆ ಮತ್ತು ಜನಸಾಮಾನ್ಯರಿಗೆ ಯುದ್ಧದ ಬಗ್ಗೆ ಇದ್ದ ಮನಸ್ಥಿಯನ್ನು ತಿಳಿಸುತ್ತದೆ.

ಟಿಪ್ಪುವಿನ ಕಾಲದ ಆಡಳಿತ ಶಿಸ್ತಿಗೆ ಹೆಸರಾಗಿತ್ತು. ದಾರಿಹೋಕರನ್ನು ದರೋಡೆ ಮಾಡುತ್ತಿದ್ದ ಕಳ್ಳಕಾಕರನ್ನು ಹಾಗೂ ಯಾವುದೇ ಅಪರಾಧಿಯನ್ನು, ಯಾವುದೇ ತಪ್ಪಿತಸ್ಥ ವ್ಯಕ್ತಿಯನ್ನು ದಳವಾಯಿ ಹಿಡಿದು ತಂದು ಹುಲಿಯ ಬಾಯಿಗೆ ಆಹಾರವಾಗಿ ಕೊಡುತ್ತಿದ್ದರು.

'ತಲೆಯ ಮೇಲೆ ಪಾಗು ಇದ್ದರಲ್ಲವೇ ನವಾಬ ಎನಿಸಿಕೊಳ್ಳುವುದು. ಕಿರೀಟ ತಾನೆ ಅರಸನನ್ನು ಜನರಿಂದ ಬೇರೆ ಮಾಡುವುದು. ಈ ಪಾಗು, ಈ ಕಿರೀಟ ಬಲು ಭಾರವೆನಿಸುತ್ತಿದೆ. ದೇಹಶಕ್ತಿ ಕರಗಿ ಉತ್ಸಾಹ ಜಾರುತ್ತಿದೆ. ಯಾರೂ ನನ್ನನ್ನು ನವಾಬನೆಂದು ಕರೆಯದ ಜಾಗಕ್ಕೆ ನಡೆಯಬೇಕೆನಿಸುತ್ತಿದೆ. ಅರಮನೆ ಅಂತಃಪುರವನ್ನು ಬಿಟ್ಟು ಅನಾಮಿಕನಾಗಿ ಬದುಕಬೇಕೆನಿಸುತ್ತಿದೆ'. (ಪು.೨೫) ಎಂಬ ಟಿಪ್ಪುಸುಲ್ತಾನನ ಮಾತು ತನ್ನಿಬ್ಬರು ಮಕ್ಕಳನ್ನು ಕುಂಪಣಿಯವರಿಗೆ ಒತ್ತೆಯಿಟ್ಟ ನಂತರ ಆತನ ಚಿಂತಾಜನಕ ಸ್ಥಿತಿಯನ್ನು ತಿಳಿಸುತ್ತದೆ.

ಶ್ರೀರಂಗಪಟ್ಟಣದ ರಾಜಧಾನಿಯನ್ನು ಚಿತ್ರದುರ್ಗಕ್ಕೆ ಬದಲಾಯಿಸುವ ಕುರಿತು ಟಿಪ್ಪು ಚಿಂತಿಸುತ್ತಾನೆ. 'ಚಿತ್ರದುರ್ಗಕ್ಕೆ ರಾಜಧಾನಿಯನ್ನು ಬದಲಾಯಿಸಿದರೆ ಹೇಗೆ ದಳವಾಯಿ. ಕಾವೇರಿ ಮಧ್ಯದ ಕೋಟೆಗಿಂತ ಗಿರಿದುರ್ಗ ಬಳಸಿದ ಆ ಕೋಟೆ ಬಲವಾದುದಲ್ಲವೇ' ಇದೇ ಅಲೋಚನೆಯನ್ನು ಹೈದರಾಲಿ ಬಿದನೂರು ವಿಜಯದ ನಂತರ ಶ್ರೀರಂಗಪಟ್ಟಣದ ರಾಜಧಾನಿಯನ್ನು ಬಿದನೂರಿಗೆ ವರ್ಗಾಯಿಸುವ ಯೋಚನೆ ಮಾಡುತ್ತಾನೆ. ವ್ಯಾಪಾರಕ್ಕೆ ಬಂದರು, ಮಲೆನಾಡಿನ ಸಮೃದ್ಧಿ, ಗಿರಿಕೋಟೆಗಳಿಂದ ಆವೃತ್ತವಾದ ಆ ಪ್ರದೇಶ ಶತ್ರುಗಳಿಂದ ರಕ್ಷಣೆಗೆ ಯುಕ್ತವಾದುದು ಎಂಬುದು ಅವನ ಆಲೋಚನೆಯಾಗಿತ್ತು. ಇದು ಹೈದರಾಲಿ ಮತ್ತು ಟಿಪ್ಪುವಿನ ಚಾಣಾಕ್ಷತನವನ್ನು ತೋರಿಸುತ್ತದೆ.

'ಈಗ ರಾಜಧಾನಿಯನ್ನು ಬದಲಾಯಿಸುವುದು ಎಂದರೆ ಕುದುರೆ ಆನೆ ದಳಪತಿಗಳು ಸೈನಿಕರು ಅವರ ಸಂಸಾರಗಳು ಎಲ್ಲ ಸಾಗಿಸಬೇಕಲ್ಲ. ಪ್ರಜೆಗಳು ಬರದಿದ್ದರೂ ಚಿಂತೆಯಿಲ್ಲ ಅರಮನೆಯ ಸುತ್ತಿನವರಾದರೂ ಅಷ್ಟು ದೂರ ಪ್ರಯಾಣ ಮಾಡಬೇಕಲ್ಲ. ಹಾದಿಯಲ್ಲಿ ಎಲ್ಲರಿಗೆ ಬುತ್ತಿಯಾಗಬೇಕು ಅಲ್ಲೆ ಕುಂಪಣಿಯವರ ಸೈನ್ಯ ಎದುರಾದರೆ, ಬರಿಗೈಯಲ್ಲಿ ಅದೂ ಪ್ರಯಾಣ ಮಧ್ಯೆ ಏನು ಮಾಡುವಂತಿದೆ ಚಿತ್ರದುರ್ಗ ಸುತ್ತಿನ ಪಾಳೆಯಗಳನ್ನು ಗೆದ್ದು ಕೊಟ್ಟ ಆ ಮದಕರಿ ನಾಯಕರ ನಂಬಿಕೆಯನ್ನು ನಾವು ಉಳಿಸಿಕೊಳ್ಳಲಿಲ್ಲ. ಇದು ರಾಜಧಾನಿಯನ್ನು ವರ್ಗಯಿಸಲು ಇದ್ದ ಆ ಕಾಲದ ತೊಡಕನ್ನು ತಿಳಿಸುತ್ತದೆ.

'ಇಂಥ ವೇಳೆಯಲ್ಲಿ ನನ್ನ ತಂದೆ ಇದ್ದಿದ್ದರೆ ನನಗೆ ದಾರಿ ತೋರುತ್ತಿದ್ದರು ಶಾಲೆಯ ಮುಖವನ್ನೆ ಕಾಣದವರು ನಮ್ಮ ರಾಜಧಾನಿಯ ಹತ್ತುಪಟ್ಟು ಇದ್ದ ಚಿತ್ರಕಲ್ಲುದುರ್ಗ ಕೋಟೆಯನ್ನು ಅದೆಷ್ಟು ಜಾಣತನದಿಂದ ಸಾಧಿಸಿದರು.' ಇದು ಹೈದರಾಲಿಯು ನಿರಕ್ಷರಕುಕ್ಷಿಯಾದರೂ ರಾಜಕೀಯ ಚಾಣಾಕ್ಷನಾಗಿದ್ದು ಚಿತ್ರದುರ್ಗವನ್ನು ಜಯಿಸಿದ ಅವನ ಸಾಹಸವನ್ನು ತಿಳಿಸುತ್ತದೆ.

'ದುರ್ಗದ ಕೋಟೆಯ ಸುತ್ತಿನ ಒಳಗೆ ಕೋಟೆಯ ಸಾಮ್ರಾಜ್ಯವೆಲ್ಲ ನೆಲೆಸಿದಂತೆ ಇತ್ತು ಮದ್ದು ಗುಂಡಿನಮನೆ, ಟಂಕಶಾಲೆ, ಜಲವಸತಿ, ದವಸದ ಕಣಜಗಳು, ಸಿಪಾಯಿಗಳು, ದಂಡನಾಯಕರೆಲ್ಲ ಮೊದಲ ಸುತ್ತಿನ ಕೋಟೆಯೊಳಗೆ ಸೇರಿಕೊಂಡಿದ್ದರು. ಎಲ್ಲಿಯೂ ಒಂದು ಬಿಲವಿರಲಿಲ್ಲ.' (ಪು.೨೮) ಇದು ಚಿತ್ರದುರ್ಗ ಕೋಟೆಯ ಸ್ವರೂಪವನ್ನು ತಿಳಿಸುತ್ತದೆ.

ಹರದನಪುರದ ಕನಕಗಿರಿಯ ಕಡೆಯ ಧರ್ಮಗಲಭೆಯ ಪ್ರಸ್ತಾಪ ಕಾದಂಬರಿಯಲ್ಲಿದೆ. 'ಗುಡ್ಡ ಹತ್ತಿ ಉರಿಯುವುದಕ್ಕೆ ಒಂದು ಬೆಂಕಿ ಕಿಡಿ ಸಾಕು. ಮಕ್ಕಳಿಲ್ಲದ ಹಿರಿಯನೊಬ್ಬ ವಯಸ್ಸಾಗುವಲ್ಲಿ ತನಗೆ ವಾರಸುದಾರರಿಲ್ಲದ ಮನೆ ಮಾರು ಹೊಲ ಗದ್ದೆಯನ್ನು ಕನಕಗಿರಿಯ ಮಠಕ್ಕೆ ಬರೆಯುತ್ತೇನೆಂದ. ಅದಕ್ಕೆ ಮುಖಂಡ ನಿಮ್ಮ ಮಠಕ್ಕೆ ಭೂಮಿ ಯಾಕೆ? ನಿಮ್ಮವರೆಲ್ಲ ನಮ್ಮ ಧರ್ಮಕ್ಕೆ ಮತಾಂತರವಾಗುತ್ತಿದ್ದಾರಲ್ಲ. ನಿಮ್ಮ ಮಠವನ್ನೆ ನಮ್ಮ ಮಠಕ್ಕೆ ಅಡವಿಡುವ ಸ್ಥಿತಿಯಿದೆ. ಆಸ್ತಿಯನ್ನು ನಮ್ಮ ಹರದನಪುರದ ಮಠಕ್ಕೆ ಒಪ್ಪಿಸು ಸ್ವಾಮಿಗಳಿಂದ ನೂರು ವರಹ ಕೊಡಿಸುತ್ತೇನೆಂದ ಇಲ್ಲದಿದ್ದರೆ ನನಗೆ ಬರೆದುಕೊಡು ಅದರ ಬೆಲೆ ಕಟ್ಟಿಕೊಡುತ್ತೇನೆಂದ ಅದಕ್ಕೆ ಮುದುಕ ನಿಮ್ಮ ಮಠದ ಸ್ವಾಮಿಗೆ ಆಸ್ತಿ ದಾನಗೈಯುವುದೆನೋ ಸರಿ ನಾನು ಧರ್ಮಾರ್ಥ ಕೊಟ್ಟ ಆಸ್ತಿ ಕಡೆಗೆ ಯಾವುದಾದರು ಮಠದ ಸುತ್ತಿನ ಹೆಂಗಸಿನ ಪಾಲಾದರೆ ನನಗೆ ಕೈವಲ್ಯ ಪ್ರಾಪ್ತಿಯುಂಟೆ' ಎಂದ ಇದೇ ಧಾರ್ಮಿಕ ಗಲಭೆಗೆ ಕಾರಣವಾಯಿತು. ಈ ಗಲಭೆಯನ್ನು ನಿಯಂತ್ರಿಸುವುದಕ್ಕಾಗಿಯೇ ದಳವಾಯಿಯನ್ನು ನೇಮಿಸಲಾಗುತ್ತದೆ. ಆದ್ದರಿಂದಲೇ ದಳವಾಯಿ ಅರಮನೆಯನ್ನು ಬಿಟ್ಟು ಹೊರಡುತ್ತಾನೆ. ಇದು ಅಂದಿನ ಕಾಲದಲ್ಲಿ ಇದ್ದಿರಬಹುದಾದ ಧಾರ್ಮಿಕ ಗಲಭೆಗಳಿಗೆ ನಿದರ್ಶನವಾಗಿದೆ.

ಬೇರೆಯವರನ್ನು ಹಿಂಸಿಸುವ ಕ್ರೂರಿಗಳು ತಮ್ಮ ಕ್ರೌರ್ಯದಿಂದ ತಾವೇ ಬಳಲಿ ದುರಂತದ ಕಡೆಗೆ ಸಾಗುತ್ತಾ ಆ ಮೂಲಕ ತಮ್ಮ ತಮ್ಮ ಸತ್ಯವನ್ನು ಅರಿಯುವ ಯಾತನಾಮಯ ಸ್ಥಿತಿಯನ್ನು ನಿರೂಪಿಸುತ್ತದೆ. 'ಈ ಕಿರೀಟ ಬಲು ಭಾರವೆನಿಸುತ್ತಿದೆ. ದೇಹಶಕ್ತಿ ಕರಗಿ ಉತ್ಸಾಹ ಜಾರುತ್ತಿದೆ. ಯಾರೂ ನನ್ನನ್ನು ನವಾಬನೆಂದು ಕರೆಯದ ಜಾಗಕ್ಕೆ ನಡೆಯಬೇಕೆನ್ನುಸುತ್ತಿದೆ. ಅರಮನೆ ಅತಃಪುರ ಬಿಟ್ಟು ಅನಾಮಿಕನಾಗಿ ಬದುಕಬೇಕೆನ್ನಿಸುತ್ತಿದೆ. ನಮ್ಮನ್ನು ಯಾವ ದುರ್ಗವೂ ರಕ್ಷಿಸಲಾರದು ಪ್ರಕೃತಿಗೆ ಎಲ್ಲವೂ ತಿಳಿದಿದೆ. ಅದು ತನ್ನ ಬಳಿ ಗುಡುಗು, ಸಿಡಿಲು, ಕಂಪನವನ್ನೆಲ್ಲ ಇರಿಸಿಕೊಂಡಿದೆ. ನನ್ನ ಬಳಿ ಏನಿದೆ. ಒಂದು ಕತ್ತಿ ಇದೆಯಷ್ಟೆ. ತೋಳಿನಲ್ಲಿ ಬಲವಿದೆ. ಮೊಂಡಾಗುವ ಕತ್ತಿ ಉಡುಗಿ ಹೋಗುವ

ಬಲ ಇಟ್ಟುಕೊಂಡು ಎಷ್ಟು ದಿನ ಮೀಸೆ ತಿರುವಲು ಸಾಧ್ಯ. ಈಗ ನಮ್ಮ ಗತಿ ಕೆಟ್ಟಿದೆ. ಕೆಟ್ಟವರಿಗೆ ಕಳೆ ಎಲ್ಲಿಂದ ಬರಬೇಕು ಮುಂದಿನ ಗತಿ ಏನು ಎಂಬುದನ್ನು ನಿರ್ಧಾರ ಮಾಡುವ ಸಮಯವಿದು'. ಎಂಬ ಮಾತು ಟಿಪ್ಪುವಿನ ಮಾನಸಿಕ ಸ್ಥಿತಿಯನ್ನು ತಿಳಿಸುತ್ತದೆ.

ಟಿಪ್ಪುವಿಗೆ ಆಪ್ತನಾಗಿದ್ದು ಅವನ ಅವಸಾನದ ನಂತರ ಬ್ರಿಟಿಷ್‌ರ ವಕ್ತಾರನಾಗಿ ಅವರ ಪರವಾಗಿ ಫರ್ಮಾನು ಹೊರಡಿಸುವ ದಿವಾನ್ ಪೂರ್ಣಯ್ಯನವರ ಚಾರಿತ್ರಿಕ ವಿಚಾರಗಳು ಕಾದಂಬರಿಯಲ್ಲಿ ಬಂದಿದೆ.

೧೭೯೯ ರಲ್ಲಿ ಟಿಪ್ಪುವಿನ ಆಡಳಿತದಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿಗಳು ಯಾವ ರೀತಿ ಇತ್ತು ಎಂಬುದನ್ನು 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ಕಟ್ಟಿಕೊಡಲಾಗಿದೆ. ಹಾಗೆಯೇ ಹೈದರ್ ಮತ್ತು ಟಿಪ್ಪು ಆಡಳಿತ, ರೀತಿ ನೀತಿಗಳು, ಒನಕೆ ಓಬವ್ವನ ಸಾಹಸ, ಟಿಪ್ಪುವಿನ ಅಸಹಾಯಕತೆ, ಯುದ್ಧದ ಅನಿವಾರ್ಯ, ಜಾತಿ ಸಂಘರ್ಷ ಇಂತಹ ಇನ್ನು ಅನೇಕ ಸಂಗತಿಗಳು ಈ ಕಾದಂಬರಿಯಲ್ಲಿ ನಿರೂಪಿಸಲ್ಪಟ್ಟಿವೆ.

ಕುಂಪಣಿ ಸರಕಾರದ ವಸಹಾತುಶಾಹಿ ರಾಜಕಾರಣದ ಪ್ರಸ್ತಾಪವನ್ನು ಕಾದಂಬರಿ ಪರೋಕ್ಷವಾಗಿ ಮಾಡುತ್ತದೆ. ಅದರ ವಿರುದ್ಧ ಟಿಪ್ಪುವಿನ ಹೋರಾಟ, ಅವನ ಸೋಲು ತನ್ನವರಿಂದಲೆ ಅವನು ಅನುಭವಿಸುವ ವಿಶ್ವಾಸ ದ್ರೋಹ ಅವನ ಹತಾಶೆ ದುರಂತಗಳು ಕಾದಂಬರಿಯಲ್ಲಿ ವ್ಯಕ್ತವಾಗಿದೆ.

---

**ಅಡಿಟಿಪ್ಪಣಿ**

೧ ಎಸ್.ಆರ್. ವಿಜಯಶಂಕರ, ವಿಜಯವಾಣಿ (ಲೇ) ೨೩.೦೬.೨೦೧೩ ಪು ೦೬

೨ ಪ್ರತಿಸ್ಪಂದನ ಎಚ್.ಎಸ್. ಶಿವಪ್ರಕಾಶ್ ಪ್ರಾಜಾವಾಣಿ ದಿನ ಪತ್ರಿಕೆ ೧೫ ನೇ ಫೆಬ್ರವರಿ ೨೦೧೩

## ಅಧ್ಯಾಯ : ೩

## ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ಜಾನಪದೀಯ ಸಂಗತಿಗಳ ಅಧ್ಯಯನ

ಜಾನಪದ ನಿಧಿ ಎಂದೇ ಕರೆಯಲ್ಪಡುವ ಕೃಷ್ಣಮೂರ್ತಿ ಹನೂರರು ಆಸಕ್ತಿಯಿಂದ ಕ್ಷೇತ್ರಕಾರ್ಯ ನಡೆಸಿದ ಜಾನಪದ ವಿದ್ವಾಂಸರು. ಜಾನಪದದ ಅಧ್ಯಯನ ಅವರಿಗೆ ಇತಿಹಾಸವನ್ನು ಹೊಸ ದೃಷ್ಟಿಯಲ್ಲಿ ನೋಡುವ ಶಕ್ತಿ ನೀಡಿದೆ. ನಮ್ಮ ನಾಡಿನ ಸಮೃದ್ಧವೂ ವೈವಿಧ್ಯಮಯವೂ ಆದ ಜಾನಪದ ಸತ್ವವನ್ನು ಈ ಕಾದಂಬರಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಯುದ್ಧವನ್ನು ಪರಾಕ್ರಮ ಇಲ್ಲವೇ ವಿಜಯದ ಸಂಕೇತವಾಗಿ ಭಾವಿಸುವುದಕ್ಕಿಂತ ಸಾಮಾನ್ಯ ಜನರ ಪಡಿಪಾಟಲು ಹಾಗೂ ದುರಂತದ ಕಥೆಯಾಗಿಸಿ, ಜನಪದರ ಬದುಕು ಬವಣೆಯನ್ನು ಇಲ್ಲಿ ಚಿತ್ರಿಸಿದ್ದಾರೆ.

ಕಾದಂಬರಿಯಲ್ಲಿ ಸಾಂದರ್ಭಿಕವಾಗಿ ಜನಪದೀಯ ಅಂಶಗಳನ್ನು ತುಂಬಿ ತುಳುಕುತ್ತದೆ. ಜನಪದ ಜಾತ್ರೆಯನ್ನು ಕಾದಂಬರಿಯಲ್ಲಿ ಮನೋಜ್ಞವಾಗಿ ವಿವರಿಸಿದ್ದಾರೆ. ದಳವಾಯಿ ಗಾಯಗೊಂಡು ಬಿದ್ದಿದ್ದಾಗ ಕುದುರೆ ಆತನನ್ನು ಒಂದು ಜನಸಮೂಹದ ಕಡೆ ಹೊತ್ತು ಬರುತ್ತದೆ. ಅಲ್ಲಿ ಜಾತ್ರೆಯೊಂದು ನಡೆಯುತ್ತಿದ್ದು, ಜೀವೈಕ್ಯ ಸಂತನೊಬ್ಬನ ಜಾತ್ರೆ ಅದಾಗಿದ್ದು. ಅಲ್ಲಿ ಸುತ್ತೇಳು ಗ್ರಾಮದ ಸಾವಿರಾರು ಮಂದಿ ಹೆಂಗಸರು, ಗಂಡಸರು, ಪ್ರಾಯಸ್ಥರು, ಮುದುಕರು, ಮಕ್ಕಳು, ಕುಣಿಯುವವರು, ತಮಾಷೆಯವರು ಎಲ್ಲರೂ ಅಲ್ಲಿ ನೆರೆದಿದ್ದರು ಎಂದು ಜಾನಪದ ಜಾತ್ರೆಯನ್ನು ವರ್ಣಿಸಿದ್ದಾರೆ. ರಾತ್ರಿಯೆಲ್ಲ ಹಗಲಿಗೆ ತಂಬೂರಿ, ಕೈಯ್ಯಗಗ್ಗರ, ಗುಮುಚಿ, ಬಡಿದು ಹಾಡುತ್ತಿದ್ದ ಹಾಡುಗಾರರು, ಹಾಡು ನಾಟಕದಂತೆ ರಾಗ ಬೆರೆತ ಪದದಂತೆ ಕೇಳಿಸುತ್ತಿತ್ತು. ಹಾಡೊಳಗಿನ ಸಂತನು ಪರಂಜ್ಯೋತಿ ಸ್ವರೂಪನಂತೆ ಅವನೇ ಈ ಲೋಕವೆಲ್ಲಾ ಸೃಷ್ಟಿಸಿದ್ದಾಗಿ ಕಥೆ ಹೇಳುತ್ತಿದ್ದರು. ಇದು ಜನಪದರ ಸೃಷ್ಟಿಯ ಲೋಕ ಸೃಷ್ಟಿಯ ನಂಬಿಕೆಯಾಗಿದ್ದು ಕಾದಂಬರಿಯಲ್ಲಿ ಜಾನಪದ ಕಥಾ ನಿರೂಪಕನು ಹೀಗೆ ಹೇಳುತ್ತಾನೆ.

'ಕಾಲಾನುಕಾಲದ ಹಿಂದೆ ಲೋಕವಾದ ಲೋಕವೆಲ್ಲಾ ಜಲಮಯವಾಗಿದ್ದಿತ್ತು. ನೀರೇ ನೀರಾದ ಜಲಮಧ್ಯದಿಂದ ಓಂಕಾರವೆಂಬ ಶಬುದ'

'ಓಂಕಾರವೆಂಬ ಶಬುದವೆಂದರೆ?'

ಮುಮ್ಮೇಳಗಾರ ರೋಮಾಂಚನಗೊಂಡಂತೆ 'ಏನಂತ ಹೇಳಲಿ, ಆ ಶಬುದದ ಮರ್ಮವ. ಅಕಾರ ಉಕಾರದೊಂದಿಗೆ ಮಕಾರವೂ ಸೇರಿಕೊಂಡು ಏಕವಾಗಿ ಕೇಳಿಸುವಂಥ ನಾದ. ಇಂತಿರಲು ಓಂಕಾರ ರೂಪದಂತೆ ಪಾತಾಳ ಲೋಕದಿಂದ ಉದ್ಭವವಾದರು ಪರಂಜ್ಯೋತಿ'

ಪರಂಜ್ಯೋತಿ ಎಂದರೆ ಎಂಥವರಯ್ಯ?

ಭಕ್ತಾ ಆ ನಮ್ಮಪ್ಪ ಪರಂಜ್ಯೋತಿ ಯಾರಂತ ಕೇಳುತ್ತಿಯಾ, ಓಹ್, ಖಂಡುಗ ಜ್ಞಾನದವರು, ಸಕಲವನು ಅರಿತವರು ಪರಮೇಶ್ವರನ ದಾಯದಿ, ಪಾತಾಳ ಲೋಕದಿಂದ ಉದ್ಭವವಾದವರು ಕಂದ' ಎಂದು ಹೇಳಿ ಮುಮ್ಮೇಳಗಾರ ಕಥೆಗಾರ ಭಕ್ತಿ ಭಾವದಲ್ಲಿ ಕಣ್ಣು ಮುಚ್ಚಿ ಕೈ ಮುಗಿದು ನಿಂತ.

ಅಮೇಲೆ ಸಕಲವನ್ನು ಅರಿತವರಾದ ಪರಂಜ್ಯೋತಿ ಸ್ವರೂಪರಾದ ಸಿದ್ಧರು ಪಾತಾಳದಿಂದ ಬಂದವರಾಗಿ ಏನಂತ ಯೋಚಿಸಿದರೆಂದರೆ ಎರೆಂಬತ್ತುಂಟು ಕೋಟಿ ಜೀವರಾಶಿಗಳಿಗೆ ನಿಂತ ನೆಲವಾಗಬೇಕು, ಹುಲ್ಲು ಗರಿಕೆ ಚಿಗುರಬೇಕು. ಜೀವರಾಶಿಗಳ ಜೀವ ಉಳಿಯಬೇಕು. ಆಳವಾದ ಜಲವೆಲ್ಲ ತೊರೆ, ಹಳ್ಳ, ಹೊಳೆಯಾಗಿ ಹರಿದು ಸಕಲ ಮೃಗ, ಪಕ್ಷಿ, ಶಿಶುಜಾತಿ ಸಂಕುಲಕೆ ಕುಡಿವ ತೀರ್ಥವಾಗಬೇಕು ಹೀಗೆಂದು ಧರೆಗೆ ದೊಡ್ಡವರು....

'ಭಲಾಭಲಾ, ಖಂಡುಗ ಜ್ಞಾನದ ಅರುವಿನ ಮೂರುತಿ ಏನಯ್ಯ ಮಾಡಿದರು.

'ಗುಡ್ಡಾ, ಧರೆಗೆ ದೊಡ್ಡವರು ಏನು ಮಾಡಿದರಂತೆ ನೀನು ಬೆಸೆಗೊಂಬುವಲ್ಲಿ ಮಹಾಂತರು ಲೋಕಸೃಷ್ಟಿ ಮಾಡಲು ಹೆಗಲ ಜೋಳಿಗೆಗೆ ಕೈ ಹಾಕಿದರು. ಈಬೂತಿಗಟ್ಟಿ ತೆಗೆದರು. ಗಟ್ಟಿಯ ಮಂತ್ರಿಸಿ ನಾಗಬೆತ್ತದಿಂದ ಒಂದೇಟು ಹೊಡೆದರು'

ಮಂತ್ರಿಸಿದ ಗಟ್ಟಿ ಏನಾಯಿತು ?

'ಎರಡು ಹೋಳಾಯಿತು, ಗುರುವು ಒಂದು ಹೋಳನೆ ಭೂಮಿ ಮಾಡಿದರು ಮತ್ತೊಂದು ಹೋಳ ಮೇಲಕ್ಕೆಸೆದು ಆಕಾಶವ ಮಾಡಿದರು....

' ಆಹಾ ಶಿವ ಶಿವಾ....

'ಭೂಮಿಯ ಮೇಲೆ ಪಾದವೂರಿ ನಿಂತುಕಂಡ ಗುರುವು ತಮ್ಮ ಕೊರಳ ಸರದ ಒಂದು ರುದ್ರಾಕ್ಷಿಯ ತಗುದು ನೆಲದ ಮೇಲೆ ಒಗೆದು ಗಿಡ ಮರವು ಸೃಷ್ಟಿಯಾಗಲಿ, ಅವು ನನ್ನ ಶಿಶು ಮಕ್ಕಳಿಗೆಲ್ಲ ಆಹಾರ ಪದಾರ್ಥ ಕರುಣಿಸುವಂತಾಗಲಿ' ಎಂದರು.

'ಆಹಾ ನರಮಾನವರಿಗೆಲ್ಲ ಅನ್ನವ ಕರುಣಿಸಿದ ಗುರುಕರುಣೆ ಘನವಾದುದಯ್ಯ'

'ಪರಂಜ್ಯೋತಿಗಳು ಮತ್ತೇನೆಂದರು, ಲೋಕದ ಶಿಶು ಮಕ್ಕಳಲ್ಲಿ ಯಾರಾದರೂ ಹಾದಿ ಬಿಟ್ಟು ರಾಕ್ಷಸರಾದಲ್ಲಿ, ಹಸನಿಲ್ಲದ ಅರಸರಾದಲ್ಲಿ ಅವರನು ಸಂಹಾರ ಮಾಡುವ ಆದಿಶಕ್ತಿ ಜನ್ಮ ತಾಳಲಿ ಎಂದು ಗುರುವು ರೌದ್ರವತಾರ ತಾಳಿ ಕೆಂಗಣ್ಣು ಬಿಟ್ಟರು'

'ಹುಟ್ಟಿದಂತ ಜಗನ್ಮಾತೆ ಆದಿಶಕ್ತಿ ಹೇಳಿದಳು. ಗುರುವೆ ನಿನಗೆ ಶರಣಾದ ಶಿಶು ಮಕ್ಕಳನು ಹಾಲೂಡಿ ಕಾಪಾಡುತ್ತೀನಿ. ಎದುರಾಡಿ ಮೀಸೆ ತಿರುದು ಮೆರೆವರನೆಲ್ಲ ಹುಲಿಯನ್ನೇರಿ ಹೊರಟು ರಕ್ತ ಕಾರಿಸುತ್ತೀನಿ ಎಂದು ಶೂಲವೆತ್ತಿ ಕಿಲಕಿಲ ನಕ್ಕಳಂತೆ. ಭೂಮಿ, ಆಕಾಶ, ಹರಿವತೊರೆ, ಗಿಡ,

ಮರ, ಪ್ರಾಣಿ, ಪಕ್ಷಿ, ನರರನೇ ಸೃಷ್ಟಿ ಮಾಡಿದಂತ ಗುರುವು ಈ ಜಂಬೂ ದ್ವೀಪದ ತೆಂಕುದಿಕ್ಕಿನ ಕಾವೇರಿ ತೀರ್ಥದ ತಡಿಯಲ್ಲಿ ದೇವ ಮಾನವನಂತೆ ಏಕವಾಗಿ ಒರಗಿರುವುವರಲ್ಲಾ...'ಎಂದು ಜಾತ್ರೆ ಸಂದರ್ಭದಲ್ಲಿ ನಡೆಯಬಹುದಾದ ಜಾನಪದ ಕಥನವನ್ನು ಮನೋಜ್ಞವಾಗಿ ಚಿತ್ರಿಸಿದ್ದಾರೆ. ಇಲ್ಲಿ ಜಾನಪದ ಪರಂಪರೆಯ ನಂಬಿಕೆಯನ್ನು ಸ್ಥಳೀಯರ ನಂಬಿಕೆಯೊಂದಿಗೆ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ. [1]"ಹನೂರರ ಕಥಾಪ್ರಪಂಚ ಗ್ರಾಮೀಣ ವಿವರಗಳನ್ನು ಸವಿವರವಾಗಿ ಅಭಿವ್ಯಕ್ತಿಸಲ್ಪಟ್ಟಿದೆ. ನವೋದಯದಲ್ಲಿ ಕುವೆಂಪು, ಕಾರಂತ, ಬೇಂದ್ರೆಯವರ ಸಾಹಿತ್ಯದಲ್ಲಿ ಕಂಡುಬರುವ ಜಾನಪದಪ್ರಜ್ಞೆ ತೇಜಸ್ವಿ ದೇವನೂರುಮಹಾದೇವ ಅವರ ಕಥೆಗಳಲ್ಲಿನ ಗ್ರಾಮೀಣ ವಾತಾವರಣವನ್ನು ಇಲ್ಲಿ ಕಾಣಬಹುದು".[1]

ಜನಪದರ ಬದುಕಿನಲ್ಲಿ ಮಹತ್ವದ ಸ್ಥಾನ ಪಡೆದಿರುವ ಬಸವನ ಮೆರವಣಿಗೆಯನ್ನು ಕಾದಂಬರಿಯಲ್ಲಿ ವರ್ಣಿಸಿದ್ದಾರೆ. 'ಎಲ್ಲರ ಹಿಂದೆ ಬಸವಣ್ಣನ ಮೆರವಣಿಗೆ ಬಂದಿತು. ಜನ ಸಮೂಹ ಲೆಕ್ಕವಿಲ್ಲದಂತೆ ನೆರೆದಿತ್ತು. ಬಸವಣ್ಣ ಕೊಂಬಿನಿಂದ ಹಿಡಿದು ಮೈಮುಖವೆಲ್ಲ ಅಲಂಕಾರವಾಗಿತ್ತು. ಆಗ ಜಾತ್ರೆಯಲ್ಲಿ ನೆರೆದ ಜನ ಬಸವಣ್ಣ ಹಿಂದೆ ಮುಂದೆ ಬರುತ್ತ 'ಧರ್ಮದ ಬೀಜ ಬೆಳೆಯಲಿ, ಕರ್ಮದ ಬೀಜ ಅಳಿಯಲಿ, ಏರಿಗೆ ಹೆಗಲು ಕೊಡುವ ಬಸವನೇ, ನಿನಗೆ ಜೋಡು ಕೈಗಳ ಮುಗಿದೇವು' ಎಂದು ಕೂಗುತ್ತಿದ್ದರು. ಜಾತ್ರೆಯ ದಿನ ಅರ್ಧರಾತ್ರಿ ಕಳೆಯುವಲ್ಲಿ ಅಲಂಕರಿಸಿದ ಬಿದಿರ ಕಿರೀಟಕ್ಕೆ ಜನರೆಲ್ಲ ಬೆಂಕಿ ಇಟ್ಟರು. ಬಿದಿರಿಗೂ ಎಣ್ಣೆ ಮೆತ್ತಿದ ದಾಳಕ್ಕೂ ಬೆಂಕಿ ಹತ್ತಿ ಧಗಧಗ ಉರಿದು ಜ್ವಾಲೆ ಮೇಲೆದ್ದಿತು. ಕುಣಿದು ಕುಪ್ಪಳಿಸುತ್ತಿದ್ದ ಜನ ತಮ್ಮ ಪುಟ್ಟಿಯಲ್ಲಿದ್ದ ರಾಗಿ, ಜೋಳ, ಕಬ್ಬು, ನವಣೆ, ಸಾರ್ಮೆ, ಆರ್ಕ, ದವಸವನ್ನು ಹಿಡಿಹಿಡಿಯಾಗಿ ಬೆಂಕಿಗೆ ಎರಚುತ್ತಿದ್ದರು. ಇಕಾ ನಮ್ಮ ಭಾಗ ಇಗೋ ನಮ್ಮ ಕಂದಾಯ ಹಿಡಿ ನಮ್ಮ ಋಣ ಉಂಡು ಉರಿದು ಬೂದಿಯಾಗು ಎಂದು ಎರಚುತ್ತಿದ್ದರು.

ಕಾದಂಬರಿಯಲ್ಲಿ ಜನಪದರು ಹಬ್ಬ ಹರಿದಿನ ಜಾತ್ರೆಗಳಲ್ಲಿ ಗಂಡಸರು ಹೆಂಗಸರಂತೆ ವೇಷತೊಟ್ಟು ಮೆರವಣಿಗೆ ಹೊರಡುತ್ತಿದ್ದರು ಎಂದೂ ಹೇಳಿದ್ದಾರೆ. ಇದು ಹೆಂಗಸರನ್ನು ಪರೋಕ್ಷವಾಗಿ ದುಷ್ಟ ದಾರಿಹೋಕರಿಂದ ರಕ್ಷಿಸುವ ಜನಪದರ ತಂತ್ರವಾಗಿತ್ತು. ಹಾಗೆಯೇ ಅಲೆಮಾರಿಗಳ ಗುಂಪಿನ ಜೀವನ ವೈಖರಿಯನ್ನು, ಅವರಿಗೆ ಸಮಾಜ ಹೇರುವ ನಿರ್ಬಂಧಗಳನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಅವರು ಬೇಟೆಯಾಡಿ ತಂದ ಪ್ರಾಣಿಗಳನ್ನು ಆಹಾರವಾಗಿ ಮಾಡಿಕೊಂಡು ಕುಡಿದು ತಿಂದು ತಮ್ಮ ದೈನಂದಿನ ಆಯಾಸವನ್ನು ಕಳೆಯುವ ಜೀವನ ವೈಖರಿ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ಕಾವ್ಯಕಥನವೂ ಇದೆ.

ಕಂಚುನಂಗೆ ಹೊಳೆವ ಹೆಣ್ಣೆ

ಹೊರಳಿ ನೋಡೆ ಕಣ್ಣು ತೆರೆದು

ಕುತುನಿ ಚೆಂಡು ತೆರೆದು ತೋರೆ

ರತ್ನದಂಥ ಪುರುಷ ನಾನು...

ಕಣ್ಣು ನೋಡಿಕಪ್ಪು ತಂದೆ.... (ಅನುಬಂಧ ನೋಡಿ)

ಇದು ಅಲೆಮಾರಿ ಬದುಕಿನ ಚಿತ್ರಣವನ್ನು ಜಾನಪದೀಯ ಹಿನ್ನೆಲೆಯಲ್ಲಿ ಕಟ್ಟಿಕೊಡುತ್ತದೆ.

ಜಾನಪದೀಯ ನೆಲೆಯಲ್ಲಿ ವೀರಗಾಸೆಯ ಪ್ರಸಂಗ ಕಾದಂಬರಿಯಲ್ಲಿ ಬಳಕೆಯಾಗಿದೆ. ಲಗ್ನಪೂರ್ವದ ಗಂಗಾಮಾತೆಯ ಮೆರವಣಿಗೆಯಲ್ಲಿ ವೀರಗಾಸೆಯವನು ಶಿವನ ಕಥೆ ಹೇಳಿಕೊಂಡು ಲಯಬದ್ಧವಾಗಿ ಕುಣಿಯುತ್ತಿದ್ದ ದೃಶ್ಯವಿದೆ. ತಲೆ ಮೇಲೆ ಕಿರೀಟ ಹೊತ್ತು, ಆ ಕಿರೀಟದ ಸುತ್ತಾ ಬಿಳಿ ಕೂದಲನ್ನು ಹರಡಿಕೊಂಡು, ಕೆಂಪು ವಸ್ತ್ರ ಧರಿಸಿ, ಕಾಲಿಗೆ ಗೆಜ್ಜೆ ಕಟ್ಟಿಕೊಂಡು ಅಲ್ಲಲ್ಲಿ ಮೆರವಣಿಗೆ ನಿಲ್ಲಿಸಿ ಶಿವನ ಕಥೆ ಹೇಳುತ್ತಿದ್ದ.

ಓಂ ನಮಃ ಶಿವಾಯ ಪಾರ್ವತಿ ಪತಿಯೇ ನಮಃ

ಶಿವಾ ಶಿವಾ ತೊಡೆಯಲ್ಲಿ ಪಾರ್ವತಿದೇವಿ

ಜಡೆಯಲ್ಲಿ ಗಂಗಾಮಾತೆ

ಸಡಗರದಲ್ಲಿರುವ ನಂದಿ ವಾಹನನೆ

ಮುಪ್ಪಾದವರಿಗೆ ಹಿಡಿಯನ್ನು ಕರುಣಿಸು

ಹಣ್ಣಾದವರಿಗೆ ಹಾಲು ಅನ್ನವ ಕಾಣಿಸು

ಮಕ್ಕಳಿಲ್ಲದವರಿಗೆ ಶಿಶುಗಳ ಕರುಣಿಸು

ಒಕ್ಕಲು ಮಕ್ಕಳಿಗೆ ಮಳೆಯ ಕರುಣಿಸು

ಲೋಕಕ್ಕೆ ಘನಸಂಪತ್ತು ಕೊಡುವ ಪರಮೇಶ್ವರನೆ...(ಅನುಬಂಧ ನೋಡಿ)

ಎಂದು ಕೈಯಲ್ಲಿ ಕತ್ತಿ ಹಿಡಿದು ಕುಣಿಯುವ ದೃಶ್ಯವನ್ನು ಕಲ್ಪಿಸಿಕೊಳ್ಳಲಾಗಿದೆ.

ಜಾನಪದರ ಬದುಕಿನಲ್ಲಿ ಹಾಸು ಹೊಕ್ಕಾಗಿರುವ ಗಾದೆಗಳು ಕಾದಂಬರಿಯಲ್ಲಿ ಸಂದರ್ಭೋಚಿತವಾಗಿ ಮೂಡಿಬಂದಿದೆ. ಗಾದೆ ಅನುಭವದಿಂದ ಸಿದ್ಧಿಸುವಂತದ್ದಾಗಿದೆ. ವೇದ ಸುಳ್ಳಾದರೂ ಗಾದೆ ಸುಳ್ಳಾಗದು ಎಂಬ ಜನಜನಿತ ಮಾತಿದೆ. ದಳವಾಯಿಯ ಮದುವೆ

ಸಂದರ್ಭದಲ್ಲಿ ಅತೃಪ್ತಿಗೊಂಡ ಹೆಣ್ಣಿನ ಕಡೆಯವರು ಬೀಗರ ಊತಣವನ್ನು ಕುರಿತು ಹೇಳುವಾಗ 'ಗಂಡಿನವರ ಬಿಡಾರಕ್ಕೆ ಹೋಗಿ ಬೀಗರೂಟ ಉಣ್ಣುವುದು ಅಷ್ಟರಲ್ಲೇ ಇದೆ. 'ಹಾರುವಾಗಲೆ ಕಾಣದೆ ಕಾಗೆ ತರಡು. ಪಟ್ಟಣದಲ್ಲಿ ನಮಗೆ ಸಿಗುವ ಮೆಹರುಬಾನಿ ಬೇಡ' ಎನ್ನುತ್ತಾರೆ. ಇಲ್ಲಿ ಜಾನಪದ ಗಾದೆಯ ಬಳಕೆಯ ವೈಶಿಷ್ಟ್ಯವನ್ನು ಕಾಣುತ್ತೇವೆ. ಕಾದಂಬರಿಯಲ್ಲಿ ಗಾದೆಗಳ ಬಳಕೆ ಹನೂರರ ಕಾದಂಬರಿ ರಚನೆಯಲ್ಲಿ ಜಾನಪದ ಪ್ರಜ್ಞೆಗೆ ಪ್ರತೀಕವಾಗಿದೆ.

ಜಾನಪದರು ದೂರದ ಯಾರೇ ಅಪರಿಚಿತರಾದರೂ ಅವರನ್ನು ಕರೆದು ಸತ್ಕರಿಸುವ ಔದರ್ಯ ಮತ್ತು ಹೃದಯ ಶ್ರೀಮಂತಿಕೆಯವರು ಎಂಬುದನ್ನು ಕಾದಂಬರಿಯಲ್ಲಿ ಬಳಸಿದ್ದಾರೆ. ಮುದುಕ ಅನ್ನಕ್ಕಾಗಿ ಮನೆಗೆ ಬಂದ ದಳವಾಯಿಯನ್ನು ಕುರಿತು 'ಯಾವೂರು ಕೆಡಿಸಿಬಿಟ್ಟು ಬಂದ್ಯಲೇ ಗೊರವಾ...' ಎನ್ನುತ್ತಾನೆ. ಅದಕ್ಕೆ ಅಟ್ಟಿಯಲ್ಲೆ ಇದ್ದ ಮುದುಕನ ಮಗಳು 'ಅಯ್ ದೂರದೇಸದಿಂದ ಬಂದಿರವುನು ಈ ಗೊರವಯ್ಯ ಒಂದೊತ್ತು ಉಂಡ್ಕಂಡು ವೋಗ್ಲಿ ಅಂತ ಅವ್ವ ಕರೆದವ್ಳೆ ಸುಮ್ಕಿರಪ್ಪಯ್ಯ ನೀನು...' ಮುಪ್ಪಿನ ತಂದೆ 'ಕೂಸು ಅಂಗನ್ನುಮತೆ' ಎನ್ನುತ್ತಾನೆ. ಇಲ್ಲಿ ಜನಪದರು ತಾವು ಬಡವರಾದರೂ ನಿರ್ಗತಿಕರನ್ನು ಸಲುಹುವ ಪ್ರೀತಿವುಳ್ಳವರು ಎಂಬುದನ್ನು ತೋರಿಸಿದ್ದಾರೆ.

ಜನಪದರು ಎಂದೂ ತಮ್ಮ ಸಂಸ್ಕೃತಿ ಸಂಪ್ರದಾಯಗಳನ್ನು ಚಾಚೂ ತಪ್ಪದೇ ಪಾಲಿಸುವವರು ಹಾಗೂ ಆಚಾರಶುದ್ಧಿಯನ್ನು ಬೋಧಿಸುವವರಾಗಿದ್ದಾರೆ. ದಳವಾಯಿ ದಾಸಯ್ಯನಾಗಿ ಮನೆಗೆ ಬಂದಾಗ ಮುದುಕ ಹೇಳುವ ಆಚಾರಗಳು ಗ್ರಾಮೀಣರ ಸಂಪ್ರದಾಯ ಸಂಸ್ಕೃತಿಗೆ ಸಾಕ್ಷಿಯಾಗುತ್ತದೆ. 'ಹೆಗಲ ಮ್ಯಾಲೆ ಕರಿ ಕಂಬ್ಳಿ ಎಲ್ಲಿ. ಹಣೆ ಮ್ಯಾಲೆ ಸಿವನ ಮುದ್ರೆ ಇಲ್ವಲ್ಲ. ಕತ್ತಿನಾಗೆ ಕವಡೆಮಣಿ ರುದ್ರಾಕ್ಷಿ ಬದ್ರಾಕ್ಷಿ ಏನೂ ಕಾಣೆಸ್ತಾ ಇಲ್ವಲ್ಲ. ಪಾರ್ವತಿ ಮುದ್ರೆ ಎಲ್ಲಲ ಗೋರವಾ. ನೀ ಎಂಗೆ ಪಾರ್ವತಿ ಗುಡ್ಡನಾದೆ. ಮತ್ತೆ ಸ್ವಾಮಾರ ಸುಕ್ರಾರ ನೀನು ತಾಯಿ ಹೆಸರ ಹೇಳಿ ಊರ ಮಾಲೆ ಬಿಕ್ಷೆ ಎತ್ತವುನಾ?' ಎನ್ನುತ್ತಾನೆ. ಇದು ಜನಪದರು ತಮ್ಮ ದೈವದ ಮೇಲೆ ಇಟ್ಟಿರಬಹುದಾದ ಸ್ವಾಮಿಭಕ್ತಿ ಮತ್ತು ಆಚಾರ ಶುದ್ಧಿಯಾಗಿರಬೇಕಾದ ಮಹತ್ವವನ್ನು ತಿಳಿಸುತ್ತದೆ.

ಭೂಮಿತಾಯಿಯನ್ನೆ ಶ್ರೇಷ್ಠವೆಂದು ಬಗೆದು ಅದರ ಮೇಲೆ ಅಪಾರ ಒಲವನ್ನು ಗ್ರಾಮೀಣರು ಹೊಂದಿದ್ದಾರೆ. ಮದುವೆ ಮನೆಯಲ್ಲಿ ಗಂಡು ಕೈಯಲ್ಲಿ ಗುದ್ದು ಬಾಕು ಹಿಡಿದುಕೊಂಡು ಬಂದಿದ್ದರಿಂದ ಮದುವೆಹೆಣ್ಣು ಆತ ಸೈನಿಕನಿರಬಹುದೆಂದು ಬಗೆದು ಮದುವೆಯಾಗಲು ನಿರಾಕರಿಸುತ್ತಾಳೆ. ಆಗ ಗಂಡಿನಕಡೆ ಮುತ್ತೈದೆ 'ಎಲೆಲೇ ಗಾಜಿನ ಬಳೆ ಗರತಿ, ನಮಗಂಡು ಯಾವ ಅರಮನೆಯಿಂದ ಬಂದ ಸಿಪಾಯಿವೂ ಅಲ್ಲ. ಗುರುಮನೆಯಿಂದ ಬಂದ ಸನ್ಯಾಸಿನೂ ಅಲ್ಲ. ಎಂಟೇರು ಹೊಲ ಉಳುವಂತ ಭಂಟ ಕಣವ್ವ' ಎಂದು ಹೇಳುವ ಮಾತು ಜನಪದರು ತಮ್ಮ ವೃತ್ತಿಯ ಮೇಲೆ ಇಟ್ಟಿರುವ ಗೌರವವನ್ನು ತೋರಿಸುತ್ತದೆ.

ಜನಪದ ಸರಸ ಸಾಹಿತ್ಯದಲ್ಲಿ ಪರಣಿತರಾದ ಜನಪದರ ಸರಸ-ವಿರಸಗಳನ್ನು ಕಾದಂಬರಿಯಲ್ಲಿ ಹನೂರರು ಮನೋಜ್ಞವಾಗಿ ಕಟ್ಟಿಕೊಟ್ಟಿದ್ದಾರೆ. ಮದುವೆ ಸಂದರ್ಭದಲ್ಲಿ ಗಂಡನ ಹೆಸರು ಹೇಳಲು ನಾಚಿದ ಮದುವೆ ಹೆಣ್ಣನ್ನು ಕುರಿತು ಸುತ್ತ ನೆರೆದ ಗಂಡಿನ ಕಡೆಯ ಹೆಣ್ಣು ಮಕ್ಕಳು ಹೀಗೆ ಹೇಳುತ್ತಾರೆ. 'ಲೇ ಕೂಸೆ ಮಾತು ಬರದ ಹೆಣ್ಣು ಕೂಸು ನಮಗೆ ಬ್ಯಾಡ ನಡಿ ಇತ್ತಿಂದಿತ್ಲಾಗೆ' ಎಂದಳು ಆಗಲೇ ಇನ್ನೊಬ್ಬ 'ಲೆಯ್ ಈ ಹೆಣ್ಣು ಚಂದಾಕೇನೋ ಅದೆ. ನಿಂಗೆ ಆಗದೇನೊ ಸರಿ. ಈ ಹೆಣ್ಣು ನಾಚ್ಗೆ ಬಿಡಗಂಟ ನಾವು ಇನ್ನೊಂದು ಹೆಣ್ಣು ನೋಡ್ಕಂಡು ಬರವು ನಡಿ'. ಇದು ಜನಪದರು ನವಿರಾದ ಹಾಸ್ಯದೊಂದಿಗೆ ಸಂತೋಷದ ಸಮಯದಲ್ಲಿ ತಮ್ಮ ಸಂಭ್ರಮದ ಘಳಿಗೆಯನ್ನು ಹಂಚಿಕೊಳ್ಳುವ ಪರಿಯಾಗಿದೆ.

ಕಾದಂಬರಿಯಲ್ಲಿ ಬಯಲಾಟದ ಪ್ರಸಂಗವನ್ನು ಹನೂರರು ತಂದಿದ್ದಾರೆ. ಗ್ರಾಮೀಣ ಬದುಕಿನಲ್ಲಿ ಬಯಲಾಟ ಅವಿಭಾಜ್ಯ ಅಂಗವಾಗಿದೆ. ಕಾದಂಬರಿಯಲ್ಲಿ ಕಾವೇರಿಪುರದಲ್ಲಿ ಜಾತ್ರೆಯಾಗುವುದರಿಂದ ಮತ್ತು ಹೊನ್ನೇರು ಕಟ್ಟಲು ಇನ್ನೂ ಒಂದು ತಿಂಗಳಿರುವುದರಿಂದ ಬಯಲಾಟವಾಡುವರು. ಅದರಲ್ಲಿ ದಳವಾಯಿಗೆ ಬೃಹನ್ನಳೆಯ ಪಾತ್ರ ದೊರೆಯುತ್ತದೆ. ಇಲ್ಲಿ ಗ್ರಾಮೀಣರಲ್ಲಿ ಭೀಮನ ಪಾತ್ರ ಮಾಡಲು ಆಕಾಂಕ್ಷೆ ಇರುವವರ ನಡುವಿನ ಸಂಭಾಷಣೆ ರೋಚಕವಾಗಿ ಮೂಡಿಬಂದಿದೆ. ಹಾಗೆಯೇ ನಾಟಕದ ನಿಮಿತ್ತ ಬೈರಾಪುರದವರು ನಾಟಕ ನೋಡಲು ಬರುವುದು, ನಾಟಕದಲ್ಲಿ ಅನಿರೀಕ್ಷಿತವಾಗಿ ನಾಟಕದ ಪಾತ್ರಧಾರಿ ಉತ್ತರಕುಮಾರ ಕಾಣೆಯಾಗಿ ಅದಕ್ಕೆ ಬೈರಾಪರದವರೇ ನಾಟಕಕೆಡಿಸಲು ಉತ್ತರಕುಮಾರನನ್ನು ಅಪಹರಿಸಿದ್ದಾರೆಂದು ಜಗಳವಾಡುವುದು ಇದರಿಂದ ಕಾವೇರಿಪುರ ಮತ್ತು ಬೈರಾಪುರದ ಜನರ ನಡುವೆ ಜರುಗುವ ಜಗಳ ಇವೆಲ್ಲ ಗ್ರಾಮೀಣ ಪರಿಸರದ ನೈಜ ಚಿತ್ರಣವನ್ನು ಕಣ್ಣಿಗೆ ಕಟ್ಟುವಂತೆ ನೀಡುತ್ತದೆ.

ಹಳ್ಳಿಗಳ ಮೇಲೆ ಸುತ್ತುವ ದೊಂಬರಾಟದವರು ಹಳ್ಳಿಗರಿಗೆ ತಮ್ಮ ಕೌಶಲ್ಯವನ್ನು ಪ್ರದರ್ಶಿಸಿ ಜೀವನೋಪಾಯಕ್ಕೆ ದಾರಿ ಕಂಡುಕೊಳ್ಳುತ್ತಾರೆ. ದೊಂಬರವನು ಕೌಶಲ್ಯದ ಜೊತೆಗೆ ಮಾತುಗಾರಿಕೆಯಿಂದಲೇ ಮರಳು ಮಾಡುತ್ತಾ ಜನರನ್ನು ಆಕರ್ಷಿಸಿಸುತ್ತಾನೆ. ಈ ಕಾದಂಬರಿಯಲ್ಲಿ ಕಾದಂಬರಿಯಲ್ಲಿ ದೊಂಬರ ಆಟವು ಗಮನಸೆಳೆಯುವ ಅಂಶವಾಗಿದೆ. ಇದು ಜನಪದ ಆಟದ ಪ್ರತೀಕವಾಗಿ ಮತ್ತು ಜನಪದರ ಕೌಶಲ್ಯಕ್ಕೆ ಸಾಕ್ಷಿಯಗಿ ನಿಲ್ಲುತ್ತದೆ. ಹೆಣ್ಣುಕೂಸನ್ನು ಸಣ್ಣ ಕಬ್ಬಿಣದ ಬಳೆಸುತ್ತಿನೊಳಗೆ ದೊಂಬ ತೂರಿಸುವನು. ಆ ಸರಳ ಸುತ್ತುಗಳು ಅವಳ ಮೈಕೈಯ್ಯನ್ನೆಲ್ಲ ಬಿಗಿದುಕೊಂಡಂತಾಗಿ ಅದರಿಂದ ಆಮೇಲಾಮೇಲೆ ಸಾವಧಾನ ಗತಿಯಲ್ಲಿ ಆ ಪುಟ್ಟ ಹುಡುಗಿ ಈಚೆ ಬರುವಳು. ಇನ್ನೊಂದು ಕಬ್ಬಿಣದ ವೃತ್ತಕ್ಕೆ ಸುತ್ತ ಎಣ್ಣೆಯ ಬಟ್ಟೆ ಸುತ್ತಿ ಬೆಂಕಿ ಹಚ್ಚಿ ಅದರೊಳಗೆ ತೂರಿಬರುವಂತೆ ಮಾಡುತ್ತಾನೆ. ಇದು ಜನಪದರ ಕಲೆಗೆ ಪ್ರತೀಕವಾಗಿದೆ. ಆಮೇಲೆ ಹಾವಿನ ಪುಟ್ಟಿ ತೆಗೆದು 'ಹಾವ್ಗೆ ಹಾವು ಆಯ್ತುದೆ ಮನುಷಾ ಆಗಕಿಲ್ಲ' ಎಂದು ನಾಗರಹಾವನ್ನು ಕೇರೆ ಹಾವನ್ನು ಒಂದಕ್ಕೊಂದು ನುಲಿಸಿ ಜತೆ ಮಾಡಿ ತೋರಿಸಿ ನೋಡ್ರಿ ಗಂಡಾಹೆಂಡಿರ ಆಟ ಎಂದು ಹೇಳುತ್ತಾನೆ.

ಇಲ್ಲಿ ಮನುಷ್ಯ ತನ್ನ ಸ್ವಾರ್ಥದಿಂದ ಸದಾ ಇತರರೊಂದಿಗೆ ಕಚ್ಚಾಡುವುದನ್ನು ಟೀಕಿಸಿದ್ದಾರೆ. ಗಣೆ ಇಳಿದು ಬಂದ ಹುಡುಗಿ ಅಂಗಳದಲ್ಲಿ ನಿಂಲ್ಲುವಳು ದೊಂಬ ಬೇವಿನ ಸೊಪ್ಪು ಮಂತ್ರಿಸಿ ಅವಳ ಮೈಮೇಲೆ ಹಾಕುತ್ತಾನೆ. ಇದ್ದಕ್ಕಿದ್ದಂತೆಯೇ ಆ ಕೂಸಿನ ಸುತ್ತ ಹಾವಿನ ಮರಿ ಚೇಳು ಮುಲುಗುಟ್ಟುತ್ತದೆ. ಅದನ್ನು ತೋರಿಸಿ ಅವನು 'ಇಕಾ ನೋಡ್ರಿ ಈ ಕೂಸ್ಗೆ ಒಂದು ಬೇರು ತೇಯ್ದು ಕುಡಿಸ್ತೀನಿ. ಯಾವ್ದನಾ ಹಾವು ಕಚ್ಲಿ ಅವಳ ಮೈ ಚುಳ್ ಅನ್ನಂಗಿಲ್ಲ. ಅಪ್ಪೋ ಅನ್ನಂಗಿಲ್ಲ. ಗ್ಯಾನ ತಪ್ಪಿ  ನೆಲಕ್ಕೆ ಬೀಳಂಗಿಲ್ಲ. ಏಣಿ ಮೇಲೆ ಹುಡುಗಿ ಹೆಂಗಿದ್ಲೋ ನೆಲದ ಮೆಲೂ ಹಂಗೇ ಅವುಳೇ. ನೀವೇ ಕಣ್ಣು ಮಡಿಗಿ ಸರಿಯಾಗಿ ನೋಡಿ' ಎಂದು ಕಲ್ಲಿಗೆ ನೀರು ಚಿಮುಕಿಸಿ ಬೇರು ತೇಯ್ದು ಹುಡುಗಿಯ ಬಾಯಿಗೆ ಇಡುವನು. ಅವಳ ಮೈಯಲೆಲ್ಲ ಎತ್ತ ಹಾವು ಚೇಳು ಹರಿದರೂ ಬೆಚ್ಚದೇ ಬೆದರದೇ ಆ ಹೆಣ್ಣುಕೂಸು ನಿಂತಿರುತ್ತಾಳೆ. ತಿರುಗಿ ದೊಂಬ ಕೈಯ್ಯ ಬೂದಿಯನ್ನು ಅವಳ ಮೈಯಲ್ಲ ಚೆಲ್ಲಲು ಚೇಳು ಹಾವೆಲ್ಲ ಮಾಯವಾಗುತ್ತದೆ. ಬಳಿಕ 'ಮನುಷ್ಯನ ಕಡಿತಕ್ಕೆ ನಂತಾವು ಅವುಷದಿಯಿಲ್ಲ. ಆದರೆ ಹಾವಿನ ಕಡಿತಕ್ಕೆ ನನ್ನಲ್ಲಿ ಬೇರುನಾರ್ರೈತಿ. ಅವುಷದಿ ಮಾಡಲು ಖರ್ಚಿಲ್ಲ. ಈ ಕರಿಘಟ್ಟದ ಮ್ಯಾಲೆ ವೆಂಕಟರಮಣನ ಹೆಸರು ಹೇಳಿ ಮಂತ್ರಿಸಿ ಕೊಡುವ ಈ ಬೇರನ್ನು ನೀರಲ್ಲಿ ತೇದು ಎಂಥ ಹಾವು ಕಡಿದವನಿಗೂ ಕುಡಿಸಿದರೆ, ಚಣದಲ್ಲಿ ವಿಷ ಕಾರಿಹೋಗುವುದು. ನಾನು ಕೊಡುವ ಅವುಷದಿ ಸುಳ್ಳಿನದಲ್ಲ. ಮಾತು ಸುಳ್ಳಾದರೆ ನನ್ನ ಮಕ್ಕಳು ಸಾಕ್ಷಿ. ಬೆಟ್ಟದ ಮೇಲಿನ ಸ್ವಾಮಿಯ ಪಾದ ಸಾಕ್ಷಿ' ಎನ್ನುತ್ತಾನೆ ಇದು ನಮ್ಮ ಜನಪದರ ಆಟದ ಕೌಶಲ್ಯವನ್ನು ತೋರಿಸುತ್ತದೆ. ಜೊತೆಗೆ ಹಿಂದೆ ರೂಡಿಯಲ್ಲಿದ್ದ ಜನಪದ ವೈದ್ಯದ ಬಗ್ಗೆ ತಿಳಿಸಿಕೊಡುತ್ತದೆ.

ದಳವಾಯಿಯು ತಂಗಿದ್ದ ಕಾವೇರಿಪುರದ ಗ್ರಾಮದ ಹಿನ್ನೆಲೆಯನ್ನು ಕಾದಂಬರಿಯಲ್ಲಿ ಜನಪದ ಕಥನದ ಮೂಲಕ ತಂದಿದ್ದಾರೆ. ಕಾವೇರಿಪುರದ ಮೂಲ ಪುರುಷರು ಉತ್ತರದ ಯರಿಮಲೆ, ಜರಿಮಲೆ, ಕೊಂಕಿಮಲೆ, ಜೇನುಮಲೆ, ಏಳುಮಲೆ, ಎಪ್ಪತ್ತೇಳುಮಲೆಯವರು. ಒಬ್ಬ ತಾಯ ಹೊಟ್ಟೆಯಲ್ಲಿ ಜನಿಸಿದ ಏಳು ಜನ ಅಣ್ಣತಮ್ಮಂದಿರಿಗೆ ಏಕಮಾತ್ರ ಸಹೋದರಿ ಇದ್ದಳು. ಅವಳು ಬಂಗಾರದ ರೇಖೆಯ ಚೆಲುವೆ. ಚಂದ್ರ ನೀನ್ಯಾಕೆ ಹೊಳೆಯುತ್ತೀಯೇ, ಹೂವೇ ನೀನ್ಯಾಕೆ ಅರಳುತ್ತೀಯೆ, ನಾನೇ ಹೊಳೆಯುತ್ತೀನಿ, ಅರಳುತ್ತೀನಿ ಎನ್ನುವಂತೆ ಸುಂದರಿಯಾಗಿದ್ದಳು. ಇಂತಹ ಚೆಲುವೆ ತನ್ನ ಸಂಗಡದವರೊಡನೆ ಜಾತ್ರೆಗೆ ಹೋಗಿದ್ದಾಗ ಅಲ್ಲಿಂದ ಸಾಗಿಬಂದ ಅರಸನ ಮನಸು ಅವಳ ಮೇಲೆ ಬಿತ್ತು. ದೊರೆ ಆಳುಗಳನ್ನು ಅಟ್ಟಿ ಅವಳನ್ನು ಮದುವೆ ಮಾಡಿಕೊಡಬೇಕೆಂದು ಅಜ್ಞಾಪಿಸುತ್ತಾನೆ. ಅದಕ್ಕೆ ಅವಳು ಸಮ್ಮತಿಸುವುದಿಲ್ಲ. ಏಳು ಜನ ಅಣ್ಣತಮ್ಮಂದಿರು ಅರಸನ ನಂಟು ತರು ಕರು ಕಾಯುವವರಿಗೆಲ್ಲಿಯದು ಅರಮನೆ ಮೊಖವ ನಾವು ಕಂಡವರಲ್ಲ. ಅದರ ಹೊಸ್ತಿಲ ತುಳಿದವರಲ್ಲ. ಎಂದು ಆ ದಿನವೇ ಊರು ಬಿಟ್ಟು ಹೊರಡುವರು. ಅವಳು ಇದ್ದರಲ್ಲವೇ ರಾಜನು ಮದುವೆಗಾಗಿ ಪೀಡಿಸುವುದು ತಮ್ಮನ್ನು ಶಿಕ್ಷಿಸುವುದೆಂದು ಆ ಬಂಗಾರದ ಚೆಲುವೆಯನ್ನು ಕೊಂದು ಮುಂದೆ ಸಾಗುವರು. ಅವರು ನೆಲ್ಲಿತೊರೆಯ ಗಂಡು ತೋಪಿನಲ್ಲಿ ಮಲಗಿದ್ದಾಗ ಕಾವೇರಪುರವೆಂಬ

ನಾಮವನ್ನು ಕರೆದು ಆ ದಿನ ಗೂಡನು ತಿರುವಿ ಹಾಲು ಹಯನು ಹಳ್ಳವ ಹರಿಸಿ, ಗಂಡು ಹೆಣ್ಣಿಗೆ ಒಂದೇ ನ್ಯಾಯ ಕೊಟ್ಟು ಧರ್ಮವಂತರಾಗಿ ಕುಲವೃದ್ಧಿ ಮಾಡಿದರು. ಎಂಬುದಾಗಿ ಕಾವೇರಿಪುರದ ಗ್ರಾಮದ ಹಿನ್ನೆಲೆಯನ್ನು ತಿಳಿಸಿದ್ದಾರೆ. ಇದು ಜನಪದ ಕಥಾನಕದ ಹಿನ್ನೆಲೆಯಲ್ಲಿ ಮೂಡಿಬಂದ ಗ್ರಾಮ ಚರಿತ್ರೆಗೆ ಉದಾಹರಣೆಯಾಗಿ ನಿಲ್ಲುತ್ತದೆ.

ಹೀಗೆ ಕಾದಂಬರಿಯಲ್ಲಿ ಕಾವ್ಯಮಯವಾದ ಜನಪದ ಕಥನಗಳು, ನಂಬಿಕೆಗಳು, ಜಾನಪದ ಬದುಕಿನ ಚಿತ್ರಣ ಸಂದರ್ಭನುಸಾರವಾಗಿ ನೀಡಿರುವುದನ್ನು ಕಾಣುತ್ತೇವೆ. ಕೃಷ್ಣಮೂರ್ತಿ ಹನೂರರು ಮೂಲತಃ ಜಾನಪದ ವಿದ್ವಾಂಶರು. ಆದ್ದರಿಂದ ಕಾದಂಬರಿಯಲ್ಲಿ ಜನಪದ ಅಂಶಗಳು ಸಮೃದ್ಧಿಯಿಂದ ಕೂಡಿವೆ. ಇಲ್ಲಿ ಗುಡ್ಡರು, ನೀಲಗಾರರು, ಹಗಲುವೇಷದವರು, ಬಯಲಾಟದವರು, ಸೂತ್ರದ ಗೊಂಬೆಯವರು, ದಾಸಯ್ಯಗಳು, ದೊಂಬರು, ಅಲೆಮಾರಿಗಳು ಹೀಗೆ ಅನೇಕ ರೀತಿಯ ಕಾಯಕದ ಗುಂಪುಗಳನ್ನು ಗುರುತಿಸಲಾಗಿದೆ. ಒಬ್ಬೊಬ್ಬರ ಆಚರಣೆಗಳು ರೀತಿನೀತಿಗಳು ವೈಶಿಷ್ಟ್ಯಪೂರ್ಣವಾಗಿದೆ. ಕಾದಂಬರಿಯಲ್ಲಿ ಬರುವ ಜನಪದರ ನಂಬಿಕೆ, ಸಂಪ್ರದಾಯ, ಆಚರಣೆ, ಜಾತ್ರೆ, ಜನಪದರ ಆಟ, ನಾಟಕ ಮುಂತಾದ ಜಾನಪದೀಯ ಸಂಗತಿಗಳನ್ನು ಸಮೃದ್ಧವಾಗಿದೆ.

---------------

**ಅಡಿಟಿಪ್ಪಣಿ :**

೧. **ಡಾ.ಎ.ಆರ್. ಮದನಕುಮಾರ್, ನದಿಯಾದ ನೀರ ಬಿಂದು, ಪು.ಸಂ. ೧೦೬**

# ಅಧ್ಯಾಯ : ೪

## ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ಸ್ತ್ರೀ ಸಂವೇದನೆಯ ಅಧ್ಯಯನ

ಮನುಷ್ಯನ ನಡುವೆ ಲಿಂಗಾಧಾರಿತವಾಗಿ ನಡೆಯಬಹುದಾದ ಅಸಮಾನತೆಯ ಆಚರಣೆ ಇಂದು ನೆನೆಯದಲ್ಲ. ಅದರಿಂದ ಸ್ತ್ರೀ ಸಕುಲ ಅನುಭವಿಸುತ್ತಿರುವ ನರಕ ಯಾತನೆಗಳೂ ಅಸಂಖ್ಯವಾಗಿದ್ದು ಅದಕ್ಕೆ ಕೊನೆ ಮೊದಲು ಇಲ್ಲ. ಹೆಣ್ಣಿನ ಭಾವನೆಗಳ ಅಂತರ್ದನಿ, ಒಳತೋಟಿ ಹೆಣ್ಣಿನ ಭಾವ-ಭಾವನೆಗಳ, ನೋವು-ನಲಿವುಗಳ, ಮಾನಸಿಕ ತುಮುಲಗಳ ವ್ಯಕ್ತ ರೂಪವೇ ಸ್ತ್ರೀ ಸಂವೇಧನೆಯಾಗಿದೆ. ಪುರುಷರೊಂದಿಗೆ ಸಮಾನವಿಲ್ಲದ ಸ್ಥಾನ ಪಡೆದಿರುವ ಅವಳ ಹಿಂದೆಯೂ ಒಂದು ಚರಿತ್ರೆ ಇದೆ ಸಂಸ್ಕೃತಿ ಇದೆ. ಭಾವನೆಗಳ ತಾಕಲಾಟವಿದೆ. ಇಂತಹ ಭಾವನೆಗಳಿಗೆ ಕೊಟ್ಟ ಅಭಿವ್ಯಕ್ತಿ ರೂಪವೇ ಸ್ತ್ರೀ ಸಂವೇಧನೆಯಾಗಿದೆ.

ಅಜ್ಞಾತನೊಬ್ಬನ ಆತ್ಮಚರಿತ್ರೆಯಲ್ಲಿ ಸ್ತ್ರೀಯರ ದುರಂತ ಬದುಕಿದೆ. ಪುರುಷ ಪ್ರಧಾನ ಸಮಾಜದಲ್ಲಿ ಸ್ತ್ರೀಯರು ಸಿಕ್ಕಿ ನಲುಗುತ್ತಿರುವ ಸನ್ನಿವೇಶಗಳಿವೆ. ಸ್ತ್ರೀ ಪಾತ್ರಗಳ ಮೂಲಕ ಪುರುಷ ಪ್ರಧಾನ ಸಮಾಜದ ದೌರ್ಜನ್ಯದ ಖಂಡನೆಯಿದೆ. ಅಂದಿನ ಯುದ್ದ ಸನ್ನಿವೇಶಗಳಲ್ಲಿ ಹೆಣ್ಣಿನ ಬಾಳು ಹೇಗೆ ನರಕವಾಗುತ್ತಿತ್ತು ಎಂಬುದರ ಚಿತ್ರಣವಿದೆ. ಗೆದ್ದ ಸೈನ್ಯ ಸೆರೆಸಿಕ್ಕ ಹೆಣ್ಣನ್ನು ಬಳಸಿಕೊಳ್ಳುತ್ತಿದ್ದ ರೀತಿ, ಸತ್ತ ಗಂಡನನ್ನು ಅಗಲಿರಲಾರದೆ ದೌರ್ಜನ್ಯದಿಂದ ತಪ್ಪಿಸಿಕೊಳ್ಳಲು ಸತಿಪದ್ಧತಿ ಅನುಸರಿಸುತ್ತಿದ್ದ ಬಗೆ, ಯುದ್ಧದ ಸನ್ನಿವೇಶದಲ್ಲಿ ಸೆರೆಸಿಕ್ಕ ಹೆಣ್ಣನ್ನು ಒಂದು ಭೋಗದ ವಸ್ತುವಾಗಿ ಬಳಸಿಕೊಳ್ಳುತ್ತಿದ್ದ ಬಗೆಯನ್ನು ಕಣ್ಣಿಗೆ ಕಟ್ಟುವಂತೆ ನಿರೂಪಿಸಿದ್ದಾರೆ.

ಅಜ್ಞಾತನೊಬ್ಬ ಆತ್ಮಚರಿತ್ರೆ ಕಾದಂಬರಿಯಲ್ಲಿ ಆ ಕಾಲಕ್ಕೆ ಸ್ತ್ರೀಶೋಷಣೆ ಹೇಗೆ ನಡೆಯುತ್ತಿತ್ತು ಎಂಬ ಚಿತ್ರ ಕಣ್ಣಿಗೆ ಕಟ್ಟುವಂತೆ ಮೂಡಿಬಂದಿದೆ. [೧]"ಹನೂರರ ಅಜ್ಞಾನನೊಬ್ಬನ ಆತ್ಮಚರಿತ್ರೆ ಕಾದಂಬರಿ ದಳವಾಯಿ ಒಬ್ಬನ ಆತ್ಮಚರಿತ್ರೆಯನ್ನು ಬಿಚ್ಚಿಡುವುದರೊಂದಿಗೆ ಪುರುಷರ ಅಮಾನುಷ ವರ್ತನೆಯ ಪರಾಕಾಷ್ಠತೆಯನ್ನು ಬಿಚ್ಚಿಡುತ್ತದೆ. ಅಮಾಯಕ ಹಾಗೂ ದಮನಿತ ಸ್ತ್ರೀಯರ ನೋವಿನ ದನಿಯಾಗಿಯೂ ಮೂಡಿಬಂದಿದೆ. ಕೃಷ್ಣಮೂರ್ತಿ ಹನೂರರ ಕಾದಂಬರಿ ಅಜ್ಞಾತನೊಬ್ಬನ ಆತ್ಮಚರಿತ್ರೆಯೂ ಕಾಲಗರ್ಭದಲ್ಲಿ ಪುರುಷರ ಅಟ್ಟಹಾಸಕ್ಕೆ ಬಲಿಯಾಗಿ ಹೊಸಕಲ್ಪಟ್ಟ ಮಹಿಳೆಯರ ಕೊರಳ ದನಿಯಾಗಿ ಓದುಗರ ಮನದಲ್ಲಿ ಅನುರಣನಗೊಳ್ಳುತ್ತದೆ. ಯಾಕೆಂದರೆ HISTORY ಅಂದರೆ HIS-STORY ಇತಿಹಾಸವೆನ್ನುವುದು ಅವನ ಕಥೆಯಾಗಿಯೇ ಎಲ್ಲೆಲ್ಲೂ ಮೂಡಿಬಂದಿರುವಾಗ ಹನೂರರ ಪ್ರಸ್ತುತ ಕಾದಂಬರಿ ಅವಳ ಕಥೆಯಾಗಿರುವುದು ನಿಜಕ್ಕೂ ಶ್ಲಾಘನಿಯ ಸಂಗತಿ."[೧]

ಕಾದಂಬರಿಯಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಪುರುಷ ಪ್ರಧಾನ ಸಮಾಜದ ದೌರ್ಜನ್ಯಕ್ಕೆ ಕನ್ನಡಿ ಹಿಡಿಯುವಂತೆ ಸ್ತ್ರೀ ಶೋಷಣೆ ಅವ್ಯಾಹತವಾಗಿದೆ. ಕಾದಂಬರಿಯಲ್ಲಿ ಮುಖ್ಯವಾಗಿ ದಾಸಯ್ಯನ ಮಗಳು (ದಳವಾಯಿಯ ರಖಾವು), ದಳವಾಯಿಯ ಹೆಂಡತಿ, ಮತ್ತು ನೆರೆಮನೆಯ ಸೈನಿಕನ ಹೆಂಡತಿ ಈ ಮೂರು ಪಾತ್ರಗಳು ಸ್ತ್ರೀ ಸಂವೇದನೆಯ ಪ್ರತೀಕವಾಗಿ ನಿಲ್ಲುತ್ತದೆ. ದಳವಾಯಿಯು ಯುದ್ಧಕ್ಕಾಗಿ ಹೋದಲೆಲ್ಲ ಹೆಣ್ಣುಗಳನ್ನು ಅಪಹರಿಸಿ ತರುವುದು ಮತ್ತು ಅವರನ್ನು ತನಗೆ ಬೇಕಾದಂತೆ ಬಳಸಿಕೊಂಡ ನಂತರ ಎಲ್ಲಿ ತನ್ನ ನಿಜ ಬಣ್ಣ ಬಯಲಾಗುವುದೋ ತನ್ನ ಗೌರವ ಘನತೆಗೆ ಎಲ್ಲಿ ದಕ್ಕೆಯಾಗುವುದೋ ಎಂದು ಅವರನ್ನು ಕೊಂದು ಕಾವೇರಿ ನದಿಯ ಪಾಲು ಮಾಡುತ್ತಾನೆ. ಇಲ್ಲಿ ಹೆಣ್ಣೆಂದರೆ ಕೇವಲ ಒಂದು ಭೋಗದ ವಸ್ತು ಎಂದು ಬಗೆದಿರುವ ಪುರುಷರ ಪ್ರತೀಕ ದಳವಾಯಿಯಾಗಿದ್ದಾನೆ. ಅಷ್ಟೆ ಅಲ್ಲದೆ ತನ್ನ ಘನತೆಗೆ ದಕ್ಕೆ ಬರಬಾರದೆಂದು ಅವರನ್ನು ಕೊಲ್ಲುವುದು ಅಮಾನವೀಯವಾಗಿದೆ. ಇಂತಹ ದುಷ್ಕೃತ್ಯಗಳು ಇಂದಿಗೂ ಜೀವಂತವಿರುವುದು ನಾಗರೀಕ ಸಮಾಜ ತಲೆ ತಗ್ಗಿಸಬೇಕಾದ ಸಂಗತಿಯಾಗಿದೆ.

ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರವಾದ ದಳವಾಯಿಯ ರಖಾವು ಸಾಮಾನ್ಯ ಬಡಹೆಣ್ಣು ಮಗಳೊಬ್ಬಳು ಹಣವಂತ, ಆಡಳಿತ, ಬಲಿಷ್ಠ ಪುರುಷರಿಂದ ಸಮಾಜದಲ್ಲಿ ಯಾವರೀತಿ ದೌರ್ಜನ್ಯಕ್ಕೆ ತುತ್ತಾಗುತ್ತಾಳೆ ಎಂಬುದಕ್ಕೆ ನಿದರ್ಶನವಾಗಿದೆ. ಒಮ್ಮೆ ಕಂದಾಯ ವಸೂಲಿಗೆಂದು ಹೋದಾಗ ಮಂಟೇಸ್ವಾಮಿ, ಮಾದಯ್ಯ, ಶನಿದೇವರ ಕಥೆ ಹೇಳುತ್ತಾ ಊರೂರು ತಿರುಗುವ ದಾಸಯ್ಯನ ಮಗಳನ್ನು ಕಂಡು ಆಕರ್ಷಿತನಾಗುತ್ತಾನೆ. ದಾಸಯ್ಯನ ಮಗಳನ್ನು ಕಂಡು ಕಂದಾಯದ ಬದಲಿಗೆ ಅವಳನ್ನು ತನ್ನ ಜೊತೆ ಕಳುಹಿಸಬೇಕೆಂದು ಕೇಳಿದಾಗ ನಿರ್ಗತಿಕನಾದ ದಾಸಯ್ಯ ದಳವಾಯಿ ನೀಡ ಬಹುದಾದ ತೆರದ ಆಸೆಗಾಗಿ ತನ್ನ ಮಗಳನ್ನು ದಳವಾಯಿಯ ಜೊತೆ ಕಳುಹಿಸಿಕೊಡುತ್ತಾನೆ. ತನಗೆ ಬೇಕಾದ ಹೆಣ್ಣು ಮಕ್ಕಳನ್ನು ಲಪಾಟಾಯಿಸುತಿದ್ದ ದಳವಾಯಿ ಮೊದಲ ಬಾರಿಗೆ ಹಣ ಕೊಟ್ಟು ಅವನ ಮಗಳನ್ನು ತನ್ನ ವಪ್ಪಾರೆಗೆ ಕರೆತರುತ್ತಾನೆ. ಈ ಸಂದರ್ಭದಲ್ಲಿ ದಾಸಯ್ಯನ ಮಗಳು ಹಿಂದೆ ಮುಂದೆ ತಿಳಿಯದ ಯಾವುದೊ ಒಬ್ಬ ವ್ಯಕ್ತಿಯ ಜೊತೆ ನಡುರಾತ್ರಿಯಲ್ಲಿ ಮನೆ ಬಿಟ್ಟು ಹೋಗು ಎಂದಾಗ ಅತ್ತು ಕಣ್ಣೀರು ಸುರಿಸುತ್ತಾಳೆ. ಹಿಂದೆ ಮುಂದೆ ತಿಳಿಯದ ಯಾರೋ ಒಬ್ಬನ ಜೊತೆ ತನ್ನನ್ನು ನಡುರಾತ್ರಿಯಲ್ಲಿ ಹೋಗುವುದಕ್ಕಿಂತ ಪಾಲು ಬಾವಿಯಲ್ಲಿ ತನ್ನನ್ನು ತಳ್ಳು ಎಂದು ತಂದೆಗೆ ಬೇಡಿಕೊಳ್ಳತ್ತಾಳೆ. ತನ್ನ ತಂದೆಯ ದರಿದ್ರ ಸ್ಥಿತಿಗೆ ಮರುಗುತ್ತಾಳೆ. ಅದರೂ ಅಸಹಾಯಕಳಾದ ಅವಳು ದಳವಾಯಿ ಎಂಬ ಕಾರಣದಿಂದ ಆತನ ಹಿಂದೆ ರಾತ್ರೋರಾತ್ರಿ ಮನೆ ಬಿಟ್ಟು ದಳವಾಯಿಯ ಜೊತೆ ಕುದುರೆಯೇರಿ ಬರುತ್ತಾಳೆ. ದಳವಾಯಿ ಹಿಂದೆ ಬಂದ ಅವಳಿಗೆ ಲಗ್ನ ಅಂತೇನೂ ಆಗಲಿಲ್ಲ. ಆದದ್ದು ಕತ್ತಲರಾತ್ರಿ ಕೂಡಾವಳಿ. ಕೈಯಲ್ಲಿ ಕಾಸಿಲ್ಲದ, ದುಡಿಯಲು ಮನಸ್ಸಿಲ್ಲದ ದಿಕ್ಕಿಲ್ಲದ ಅಪ್ಪನೊಂದಿಗೆ ಊರೂರು ತಿರುಗುತ್ತಿದ್ದ ದಾಸಯ್ಯನನ್ನು ಊರ ಹೆಂಗಸರು ಗದರಿದರೆ, ತಂದೆಯೊಂದಿಗೆ ಹೆಣ್ಣುಕೂಸು ಇರಬೇಕು ಕಣವ್ವಾ, ಗಂಡಿನ ಎದೆಯ ಬೆಂಕಿಯೆಲ್ಲ

ಹಿಂಗಿ ಅವನೂ ಹೆಣ್ಣಾಯ್ತನೆ ಎನ್ನುತ್ತಿದ್ದ. ರಾತ್ರೋರಾತ್ರಿ ತನ್ನನ್ನು ಎತ್ತಿಕೊಂಡು ಕುದುರೆಯಲ್ಲಿ ಕೂರಿಸಿಕೊಂಡು ಹೊರಟವನು ದಳವಾಯಿ ಎಂಬ ಕಾರಣದಿಂದ ಅವಳೆದೆಯಲ್ಲಿಯೂ ಕನಸುಗಳು ಮೂಡತೊಡಗಿದವು. 'ತನಗೆ ಮೂರು ಕಾಸಿನ ಪ್ರೀತಿಯನ್ನಾದರೂ ತೋರಿಸನೆ? ಒಂದು ಸ್ಯಾಲೆಯ ಅರಿವೆ ತಂದು ಉಡಿಸನೆ? ಬೀದಿ ಬೀದಿ ಸುತ್ತುತ್ತಿದ್ದ ನನಗೆ ಬಯಸಿದ್ದಕ್ಕಿಂತ ಬಲವಾದದ್ದೆ ಸಿಕ್ಕಿತಲ್ಲ' ಎಂದು ಮುಂದಿನ ಸುಖಕರ ಜೀವನದ ಕನಸು ಕಾಣುತ್ತಾಳೆ. ಆದರೆ ದಳವಾಯಿಯು ಒಂದು ಪಾಳುಬಿದ್ದ ಮುರುಕಲು ವಪ್ಪಾರೆಯಲ್ಲಿ ಅವಳನ್ನು ತಂದಿರಿಸಿದಾಗ ಆಕೆಗೆ ಆದ ನಿರಾಸೆ ಅಪಾರ. ಅವಳನ್ನು ಒಂದು ಭೋಗದ ವಸ್ತುವಾಗಿ ಅವಳನ್ನು ಸುಖಿಸುತ್ತಾನೆಯೇ ಹೊರತು ಅವಳನ್ನು ಹೆಂಡತಿಯೆಂದು ಒಪ್ಪಿಕೊಳ್ಳಲು ಸಿದ್ದನಿರಲಿಲ್ಲ. ಆದರೂ ತನ್ನ ಕತ್ತಿಗೊಂದು ತಾಳಿ ಅಥವಾ ಅರಿಶಿನದ ಕೊಂಬನ್ನಾದೂ ಕಟ್ಟು ಎಂದು ಪರಿಪರಿಯಾಗಿ ಅಂಗಲಾಚುತ್ತಾಳೆ. ಆದರೆ ದಳವಾಯಿ ಸೀತೆಮಾತೆಯ ಪುರುಷನಾದ ರಾಮದೇವರಂತೆ ನಾನು ಅಪ್ಪ ಹೇಳಿದ ಕನ್ಯೆಯನ್ನೇ ಲಗ್ನವಾಗುತ್ತೇನೆ. ನೀನೇನಿದ್ದರೂ ರಖಾವು ಎನ್ನುತ್ತಾನೆ. ತಿರುಕ ತಂದೆಯ ಮನೆಯಿಂದ ಸರದಾರನ ಮನೆಗೆ ಬಂದರೂ ಆಕೆಯ ಪರಿಸ್ಥಿತಿಯಲ್ಲಿ ಯಾವ ಬದಲಾವಣೆಯೂ ಆಗಲಿಲ್ಲ.

ಒಮ್ಮೆ ಆತನನ್ನು ಮದುವೆಗಾಗಿ ಬಲವಾಗಿ ಪೀಡಿಸಿದಳು. ಅರಮನೆಯ ಮುಂದೆ ಅವನ ಹೆಸರು ಹೇಳಿ ನ್ಯಾಯ ಕೇಳುತ್ತೇನೆಂದು ಬೆದರಿಸಿದಳು. ಬೆಚ್ಚಿದ ದಳವಾಯಿ ಅವಳಿಂದ ತನ್ನ ಮಾನ ಹರಾಜಾಗಬಹುದೆಂದು ಅವಳನ್ನು ಕೊಲ್ಲಲು ನಿಶ್ಚಯಿಸುತ್ತಾನೆ. ಅವನು ನಿದ್ದೆ ಹೋದಾಗ ಅವಳ ಹೆಣ್ತನ ಅವಳ ಸ್ವಾಭಿಮಾನ ಭುಗಿಲೆದ್ದು ಆತನ ಪಕ್ಕದಲ್ಲಿದ್ದ ಕಠಾರಿಯಿಂದ ಅವನನ್ನು ಕೊಲ್ಲಲು ನಿಶ್ಚಯಿಸುತ್ತಾಳೆ. ಆದರೆ ಹೊಟ್ಟೆಯಲ್ಲಿ ಬೆಳೆಯುತ್ತಿದ್ದ ಆತನ ಮೂರು ತಿಂಗಳ ಪಿಂಡ ಅವಳನ್ನು ತಡೆಯುತ್ತದೆ. ದಳವಾಯಿಯ ಮನೆಯಿಂದ ಹೊರಬಿದ್ದವಳು ಕರಿಘಟ್ಟದ ಜಾತ್ರೆಗೆ ಹೋಗುವ ಎತ್ತಿನಗಾಡಿಯರೊಂದಿಗೆ ಸೇರುತ್ತಾಳೆ. ಅವಳು ಹಿಂಬಾಲಿಸಿದ ಗಾಡಿ ಡೊಂಬರವನದು. ದಾರಿಯುದ್ದಕ್ಕೂ ಡೋಲು ಬಾರಿಸಿ ಅವನಿಗೆ ಸಹಕರಿಸಿ ತನ್ನ ಹೊಟ್ಟೆ ತುಂಬಿಸಿಕೊಳ್ಳುತ್ತಾಳೆ. ಮಡದಿ ಜಡ್ಡಾಗಿದ್ದರು ಆತ ಅವಳತ್ತ ಕಣ್ಣೆತ್ತಿ ನೋಡುವುದಿಲ್ಲ. ಆನಂತರ ಇನ್ನೊಬ್ಬನ ಗಾಡಿಹತ್ತಿ ಅವನ ಮನೆಗೆ ಹೋಗಿ ಅವನ ಹೆಂಡತಿಯ ಸಂಶಯದ ಕಣ್ಣುಗಳಿಗೆ ಸಿಕ್ಕರೂ ಹಟ್ಟಿಯಲ್ಲಿ ಜಾಗ ಪಡೆದು ಮಗುವನ್ನು ಪ್ರಸವಿಸಿದ ನಂತರ ಆ ಮನೆಯಿಂದಲೂ ಹೊರದಬ್ಬಲ್ಪಡುತ್ತಾಳೆ. ಆ ನಡುರಾತ್ರಿಯಲ್ಲಿ ಅಳುವ ಹಸುಗೂಸನ್ನು ಹೊತ್ತುಕೊಂಡು ತುತ್ತು ಅನ್ನಕ್ಕಾಗಿ ತಿರುಗುತ್ತಾಳೆ. ಬೆನ್ನಿಗೆ ಕಟ್ಟಿದ ಜೋಳಿಗೆಯಲ್ಲಿ ಅಳುತ್ತಿದ್ದ ಮಗುವಿನ ದನಿಗೆ ಅಪ್ಪ ಹೇಳುತ್ತಿದ್ದ ಕಥೆಯಲ್ಲಿ ಬರುತ್ತಿದ್ದ ಪಾರ್ವತಿ ಪರಮೇಶ್ವರು ಸಹಾಯಕ್ಕೆ ಬರಲೇ ಇಲ್ಲ. ಮಗುವನ್ನು ಶ್ರೀಮಂತರ ತಿಪ್ಪೆಗಾದರೂ ಎಸೆದು ಬಿಡಬೇಕೆಂಬ ಆಲೋಚನೆಯನ್ನೂ ಮಾಡುತ್ತಾಳೆ. ಮಗುವಿನ ಮೇಲಿನ ಪ್ರೀತಿಯಿಂದ ಹಾಗೇ ಮಾಡಲಾಗದೆ ಬೇರೊಂದು ಊರು ಸೇರಿ ತಂದೆ ಕಾಣದ ಕೂಸು ಎಂದು ಕಷ್ಟಪಟ್ಟು ಸಾಕಿ ಸಲಹುತ್ತಾಳೆ. ಆದರೆ ಬೆಳೆದ ಮಗ ತನ್ನನ್ನು ಊರಲ್ಲಿ ಬಸವಿಯಮಗ ಎನ್ನುತ್ತಾರೆ ಎಂದು ಸಿಟ್ಟಾಗಿ

ಪಾತಿವ್ರತ್ಯದ ಪ್ರಮಾಣವನ್ನು ತಾಯಿಯಲ್ಲಿ ಕೇಳುತ್ತಾನೆ. ಆದರೆ ಅವಳನ್ನು ಕುದುರೆಯೇರಿಸಿ ಹೊತ್ತುಕೊಂಡು ಹೋದ ಗಂಡನಲ್ಲದ ಗಂಡಸನ್ನೂ ಬಿಟ್ಟು ಬೇರೆ ಯಾರು ಕೂಡಿದವರಿಲ್ಲ. ಆ ಗಂಡಸನ್ನು ಬಿಟ್ಟು ಬಂದ ಮೇಲೆ ಎಲ್ಲರೂ ಅವಳನ್ನು ಊರಮೇಲಿನ ಬಸವಿ ಎಂದೇ ಕರೆದರು. ಅವಳನ್ನು ಕೂಡಿದವರು ಮಾತ್ರ ಯಾರೂ ಇಲ್ಲ. ಮಗ ವಯಸ್ಸಿಗೆ ಬಂದಾಗ ಅವಳನ್ನು, ಮನೆಯನ್ನೂ ಬಿಟ್ಟು ಸಾಲೂರು ಮಠದ ಸ್ವಾಮಿಗಳಿಂದ ದೀಕ್ಷೆ ಪಡೆದು ಲೋಕ ಕಲ್ಯಾಣಕ್ಕಾಗಿ ದೇಶಾಂತರ ಹೊರಟು ಹೋಗುತ್ತಾನೆ. ತನ್ನ ಮಗನನ್ನು ಕಣ್ಣಮುಂದೆ ಇರು ಎಂದು ಅವಳು ಅಂಗಲಾಚುತ್ತಾಳೆ. ಅದಕ್ಕೆ ಅವನು 'ಅವ್ವಾ ನಾನು ನಿನಗೆ ಹುಟ್ಟಿದ್ದು ನಿನ್ನ ಕಟ್ಟಿಕೊಂಡ ಆ ನಿನ್ನ ಗಂಡಸಿನ ವಾಂಛಲ್ಯಕ್ಕಲ್ಲ ನಾನು ಹುಟ್ಟಿದ್ದು ನಿನ್ನ ಮತ್ತು ನಿನ್ನ ಗಂಡನ ನಡು ಮಧ್ಯದ ಬೆಂಕಿಗೆ. ಗಂಡಸಾಗಿ ಆ ಬೆಂಕಿಯನ್ನು ಆರಿಸಿಕೊಳ್ಳಲೆಂದೇ ಲೋಕದ ಮೇಲೆ ತಿರುಗಲು ಹೊರಟಿರುವೆನು' ಎನ್ನುತ್ತಾನೆ. (ಪು.೧೧೬) ಇಂತು ದಳವಾಯಿಗೆ ಹುಟ್ಟಿದ ಕೂಸು ಆಕೆಯ ತಂದೆಯಂತೆ ಜಂಗಮನಾದ. ದಳವಾಯಿಯನ್ನು ಬಿಟ್ಟು ಹೋದ ಆಕೆ ಕೈಬಿಟ್ಟು ಹೋದ ಪ್ರಾಯದ ಮಗನಿಂದಾಗಿ ಗಂಡಸಾದಳು ಯಾರಿಗೂ ಅಂಜದವಳಾದಳು. ಆ ದಳವಾಯಿ ಸಿಕ್ಕಿದಲ್ಲಿ ಅವನ ದೇಹವನ್ನು ದಂಡಿಗೆಯಾಗಿಸಿ ಮೈಯ್ಯ ನರವನ್ನು ತಂತಿ ಮಾಡಿ ಅಪ್ಪ ಹಾಡುತ್ತಿದ್ದ ಪದ ಹಾಡಬೇಕೆಂದು ನನಗೆ ಮನಸ್ಸಾಗುತ್ತಿದೆ ಎನ್ನುವ ಅವಳ ಮಾತುಗಳನ್ನು ಗಮನಿಸಿದರೆ ದಳವಾಯಿಯಿಂದ ಅವಳು ಅನುಭವಿಸಿರಬಹುದಾದ ಯಾತನೆಯ ಬದುಕನ್ನು ತಿಳಿಸುತ್ತದೆ.

ದಾಸಯ್ಯನ ಮಗಳು ದಳವಾಯಿಯನ್ನು ಕೇಳಿದ್ದು ಕೇವಲ ಒಂದು ಅರಿಸಿನದ ಕೊಂಬಿಗಾಗಿ ತನ್ನ ಹೊತ್ತುಕೊಂಡು ಬಂದ ದಳವಾಯಿಯೊಡನೆ ಹತ್ತಾರು ಜನರ ಮುಂದೆ ಆತನ ಹೆಂಡತಿ ಎಂದು ಸಾರಿ ಹೇಳುವುದಕ್ಕಾಗಿ. ಆದರೆ ದಳವಾಯಿಗೆ ಅವಳ ದೇಹವನ್ನು ಸುಖಿಸುವುದು ಇಷ್ಟಾವಾಯಿತೇ ಹೊರತು ಅವಳನ್ನು ತನ್ನ ಹೆಂಡತಿಯೆಂದು ಸ್ವೀಕರಿಸುವುದು ಬೇಕಿರಲಿಲ್ಲ. ತನ್ನನ್ನು ತಾಳಿಗಾಗಿ ಪೀಡಿಸಿದಾಗ ಅವಳನ್ನು ಕೊಂದು ಕಾವೇರಿ ನದಿ ಪಾಲು ಮಾಡುವ ಯೋಚನೆ ಮಾಡುತ್ತಾನೆ. ಅವಳು ಸಿಕ್ಕಿ ತನ್ನ ಮನದ ದುಗುಡವನ್ನು ಹೇಳಿಕೊಂಡ ಮೇಲೆ ಬೆಳಕು ಮೂಡಲು ಎಲ್ಲಿ ತನ್ನ ಗುರುತು ಹಿಡಿಯುವಳೋ ಎಲ್ಲಿ ಕಸಬರಿಕೆಯನ್ನು ಕುರಿಯ ಗಂಜಲದಲ್ಲಿ ಅದ್ದಿ ಮಂಗಳಾರತಿ ಮಾಡುವಳೋ ಎಂದು ಅವಳ ಹತ್ತಿರವಿದ್ದ ಕೈಕತ್ತಿಯಿಂದಲೇ ಹೊಡೆಯುವಳೋ ಎಂದು ಮೈಗೆ ಜ್ವರ ಬಂದಂತಾಗಿ ಅಲ್ಲಿಂದ ಕಾಲ್ಕಿತ್ತನು. ಆದರೂ ಅವಳ ದುರಂತ ಬದುಕಿನ ವ್ಯಥೆಯ ಕಥೆ ಕೇಳಿ ಅವಳನ್ನು ಮತ್ತೆ ಕರೆತರುತ್ತೇನೆ ಎಂಬ ನಿರ್ಧಾರ ಕೈಕೊಳ್ಳುವನು ಆದರೆ ಆ ವೇಳೆಗಾಗಲೇ ಸಮಯ ಮೀರಿರುತ್ತದೆ. ಇದು ಕಾಣದ ವಿಧಿಯ ಕೈವಾಡವೇ ಸರಿ.? ಯಾವುದೇ ನಿರ್ಧಾರವನ್ನು ತೆಗೆದುಕೊಳ್ಳಬೇಕಾದ ಸಮಯದಲ್ಲಿ ಮಾಡದಿದ್ದರೇ ಅದರ ವ್ಯತಿರಿಕ್ತ ಪರಿಣಾಮಗಳನ್ನು ಅನುಭವಿಸಬೇಕಾಗುತ್ತದೆ ಎನ್ನುವುದಕ್ಕೆ ದಳವಾಯಿಯ ಬದುಕು ನಿರ್ಧಾರಗಳು ಸಾಕ್ಷಿ.

ದಳವಾಯಿಯ ಹೆಂಡತಿಗೆ ಆತ ದೋಚಿದಂತಹ ವಸ್ತ್ರ, ಒಡವೆಗಳಲ್ಲಿ ಆಸಕ್ತಿಯೇ ಇರಲಿಲ್ಲ. ಆತ ಅದನ್ನು ಪೆಟಾರಿಯಲ್ಲಿ ಬೀಗ ಜಡಿಯುತ್ತಿರಲು ಆಕೆ ಎಂದೂ ಆಸಕ್ತಿಯಿಂದ ಇಣುಕುತ್ತಿರಲಿಲ್ಲ. ಯಾವುದರ ಮೋಹಕ್ಕಿಂತಲೂ ಅವನ ಹೆಂಡತಿಗೆ ಅವನ ಬಗೆಗೆ ಅಪಾರ ಮೋಹ. ದಳವಾಯಿ ಆಕೆಯೊಡನೆ ಯಾವಾಗಲೂ ಮನೆಯಲ್ಲಿರಬೇಕು ಯುದ್ಧ, ಗಲಭೆ, ದೊಂಬಿ, ಹೊಡೆದಾಟ ಬಿಟ್ಟು ದುಡಿಮೆ ಮಾಡಬೇಕು ಎಂಬುದು ಅವಳ ಬೆಟ್ಟದಷ್ಟು ಆಸೆ. ನಿಮ್ಮನ್ನೆ ನಂಬಿ ಮದುವೆಯಾದೆ ನೀವು ಅರಮನೆ ಸುತ್ತ ಸುಳಿಯುವುದು ಬೇಡ ಎನ್ನುತ್ತಿದ್ದಳು. ನನ್ನ ಬಸಿರು ಬರಿದಾಗುತ್ತಿದೆ ಎಂದು ಅರಮನೆಯ ಸಹವಾಸ ಸಾಕು ಎನ್ನುವ ಅವಳ ಮನದಾಸೆಯನ್ನು ಆಸೆಗಳಿಗೆ ಸ್ಪಂದಿಸುವಷ್ಟು ವ್ಯವಧಾನ ಅವಗಿರಲಿಲ್ಲ. ಒಂದು ಪಾವು ಅಕ್ಕಿ ಆಮ್ರ ಬೇಯಿಸಿಕೊಂಡು ಮೂಲೆಯಲ್ಲಿ ಬಿದ್ದಿರಬೇಕಾದ ಪ್ರಾಣಿ ಎಂತಲೇ ದಳವಾಯಿ ಅವಳನ್ನು ತಿಳಿದಿದ್ದನು. ಆದರೂ ಆತ ಕನಸು ಕಂಡು ಬೆಚ್ಚಿ ಎದ್ದರೆ ಅವನನ್ನು ಸಮಾಧಾನಿಸಲು ಅವನ ಕೈಗಳನ್ನು ಬಿಡದೇ ಹಿಡಿದಿದ್ದ ಅವಳು ಆ ಸಮಯದಲ್ಲಿ ತನ್ನ ಮಗವನ್ನು ಬಿಡದೇ ರಕ್ಷಿಸುವ ತಾಯಿಯಂತಿದ್ದಳು. ಹಾಲು ಕರೆಯುವ ಹಸುವಿನಂತೆ ಮಗ್ಗುಲಲ್ಲೆ ಮಲಗಿರುತ್ತಿದ್ದಳು. ದಳವಾಯಿ ದಂಡನಾಯಕನಾಗುವ ಕನಸು ಕಾಣುತ್ತಿದ್ದರೆ ಅವಳು ಕರಿಘಟ್ಟದ ಗುಡ್ಡದ ಗುಡಿಯತ್ತ ಕೈಹಿಡಿದು ಕರೆದುಕೊಂಡು ನಡೆಯುವ ಕೂಸಿನ ಕನಸಿಗಾಗಿ ಕಣ್ಣು ಮುಚ್ಚಿರುತ್ತಿದ್ದಳು.

ಕಾವೇರಿಪುರದಿಂದ ತನ್ನ ಮಡದಿಯನ್ನು ನೋಡಲು ಹಿಂತಿರುಗಿ ಬಂದ ದಳವಾಯಿ ಅವಳೊಂದಿಗೆ ಬಾಳುವೆ ಮಾಡಬೇಕೆಂಬ ಆಸೆ ಮೂಡಿ ಪಾಳುಬಿದ್ದ ಶ್ರೀರಂಗಪಟ್ಟಣದಲ್ಲಿ ತನ್ನ ಮಡದಿಯನ್ನು ಹುಡುಕುತ್ತಾನೆ. ಆದರೆ ಅವನ ಅನುಪಸ್ಥಿಯಲ್ಲಿ ಆಕೆ ಹುಚ್ಚಿಯಾಗಿ ಬೀದಿ ಬೀದಿ ಸುತ್ತುತ್ತಾಳೆ. ದಳವಾಯಿಯನ್ನು ಕಂಡರೆ ಆಗದವರು ಅವನ ಹೆಂಡತಿಯ ದುಸ್ಥಿತಿಯನ್ನು ಕಂಡು ಅವಳನ್ನು ಕಿಚಾಯಿಸಿ ಅವನ ಮೇಲಿನ ಸೇಡು ತೀರಿಕೊಳ್ಳುತ್ತಾರೆ. ಅವರು 'ನಿನ್ನ ಗಂಡ ಹೊಳೆ ದಂಡೆಯಲ್ಲವನೆ ಅಲ್ಲಿ ನೋಡು ಹೋಗು' ಎಂದು ಹೇಳಿದ್ದನ್ನೆ ನಿಜವೆಂದು ನಂಬಿ ಅವಳು ನದಿ ದಂಡೆಯಲ್ಲಿ ಅಲೆದು ದಳವಾಯಿಗಾಗಿ ಪರಿತಪಿಸುತ್ತಾಳೆ. 'ಇಲ್ಲೆ ನನಗಂಡ ಕುದುರೆ ಏರಿಕೊಂಡು ವೋದ. ವಳೆ ನೀರು ದಾಟಿಹೋದ. ಅವುನು ವಾಪ್ಸು ಬತ್ತಾ ಇದ್ದದ್ದು ಇಲ್ಲೆ. ಈಗ ಬತ್ತನೆ, ಬತ್ತನೆ ಇಲ್ಲೆ ಕುಂತ್ಕಂಡು ಕಾಯ್ತಿನಿ. ಬತ್ತಿದ್ದಂಗೆ ಅಟ್ಟಿಗೆ ಕರಕ್ಕೊಂಡೋಗಿ ಅನ್ನ ಮಾಡಿ ಇಕ್ತೀನಿ' ಎಂದು ಹೊಳೆದಂಡೇಲೇ ಕೂತು ಅವನಿಗಾಗಿ ಕಾಯುತ್ತಿದ್ದಳು. ಕಡೆಗೆ ಅವನನ್ನು ಹುಡುಕುತ್ತ ಹೊರಟು ಅವನೇ ಹಿಡಿದು ತಂದ ಹುಲಿ ಬಾಯಿಗೆ ಬಲಿಯಾದಳು. ದಳವಾಯಿ ಅವಳ ಕೊಳೆತು ನಾರುವ ಹೆಣವನ್ನು ಹುಡುಕಿ ಸ್ವತಃ ಧಫನ್ ಮಾಡಿ ಗಂಡನ ಕರ್ತವ್ಯವನ್ನು ಪೂರೈಸುತ್ತಾನೆ,

ಸೈನಿಕನ ಮನದಲ್ಲಿ ಪ್ರೀತಿಯ ನವಿರಾದ ಸುಳಿವು ಮೂಡಿದ್ದರ ಕಾರಣ ಈ ಹೆಣ್ಣೇ ಯುದ್ಧದಲ್ಲಿ ಅಸಂಖ್ಯಾತ ಸಿಪಾಯಿಗಳನ್ನು ಒಂದೊಂದೇ ಏಟಿಗೆ ಸೊಪ್ಪು ಕತ್ತರಿಸಿದಂತೆ ಕೊಂದವನು. ಹೆಣ್ಣು ಮಕ್ಕಳ ಮೇಲೆ ಹುಲಿ ಎರಗಿದಂತೆ ಹಾಯ್ದವ, ಆಗ ಅವನ ಕತ್ತಿಯ

ಮೊನೆಯಷ್ಟಿರಲಿ ಸೂಜಿ ತುದಿಯಷ್ಟು ವ್ಯಥೆ ಬಿದ್ದವನಲ್ಲ. ವ್ಯಥೆಯ ಅರಿವೆ ಅವನಿಗಿರಲಿಲ್ಲ. ತೀರಿಕೊಂಡ ಖಾವಂದರನ್ನು ಮತ್ತು ಹೆಂಡತಿಯನ್ನೂ ನೆನೆದು ಅವನಿಗೆ ಅಪಾರ ದುಃಖವಾಯಿತು. ತಂದೆ ಆಯ್ಕೆ ಮಾಡಿದ ಹೆಣ್ಣನ್ನು ಹೆಸರಿಗೆ ಮಾತ್ರ ಮದುವೆಯಾಗಿ ನಿಕೃಷ್ಟವಾಗಿ ನೋಡುತ್ತಿದ್ದವನಿಗೆ ಈಗ ಅವಳ ನೆನೆಪು ಕಾಡುತ್ತದೆ. ನಾನು ಸುಲ್ತಾನರ ಕೊನೆಯ ದಿನಗಳಲ್ಲಿ ಅವಳ ಸನಿಹವಿರಲಿಲ್ಲ. ಇದ್ದರೆ ಅವಳ ಜೀವನವನ್ನು ಹೇಗಾದರೂ ಕಾಪಾಡುತ್ತಿದ್ದೆ ಎಂಬ ದುಃಖ ಮಾತ್ರವಲ್ಲ ಅವಳಿಗೆ ದ್ರೋಹ ಬಗೆದೆ ಎಂಬ ವ್ಯಥೆ ಅವನನ್ನು ಕಾಡುತ್ತದೆ.

ಸೈನಿಕನ ರಖಾವುಗಳಲ್ಲಿ ಅವನನ್ನು ಆವರಿಸಿದ ಹೆಣ್ಣು ಮತ್ತು ಅವನ ಪತ್ನಿಯ ಕಥೆಯಂತೆ ಉಳಿದ ಹೆಣ್ಣುಮಕ್ಕಳ ಗೋಳಿನ ಕಥೆಯೂ ಇದೆ. ಯುದ್ಧ ಕಾಲದಲ್ಲಿ ಹೆಣ್ಣೆ ಅತ್ಯಂತ ದೌರ್ಜನ್ಯಕ್ಕೊಳಗಾಗುವವಳು. ಹಗಲು ಯುದ್ಧದ ಗೋಳಾಟದಂತೆಯೇ ರಾತ್ರಿಯೂ ಬಿಡಾರಗಳಲ್ಲಿ ಅಸಾಧ್ಯ ನರಳಾಟ ಕೇಳಿಬರುತ್ತಿತ್ತು. ಈ ನರಳಾಟ ಗಂಡಸರದಲ್ಲ ಹೆಂಗಸರದ್ದು. ಈ ಹೆಂಗಸರೆಲ್ಲ ಈ ಹಿಂದಿನ ಹೊಡೆದಾಟದಲ್ಲಿ ಸೆರೆ ಹಿಡಿದು ತಂದವರು. ಸೀಮೆ ಗೆದ್ದರೆ ಅರಸರು ಕಣ್ಣು ಹಾಕುತ್ತಿದ್ದದ್ದು ಭಂಡಾರಕ್ಕಾದರೆ ಸೈನಿಕರು, ಸರದಾರು ಮೊದಲು ಕೈ ಹಾಕುತ್ತಿದ್ದುದ್ದು ಹೆಂಗಸರಿಗೆ. ಗೆದ್ದ ರಾಜ್ಯದ ರಾಣಿಯರು ಕೈಗೆ ಸಿಗುತ್ತಿರಲಿಲ್ಲ ಹಳದಿ ಸೀರೆಯುಟ್ಟು ನಿಂಬೆಹಣ್ಣು ಎಲೆಅಡಿಕೆ ಹಿಡಿದು ಬೆಂಕಿ ಪಾಲಾಗುತ್ತಿದ್ದರು. ಬೆಂಕಿಗೆ ಎಣ್ಣೆ, ಸೌಧೆಯ ಜಮಾವಣೆ ತಡವಾದರೆ ಅರಮನೆಯ ಸುತ್ತಿನ ಬಾವಿಗೆ ಹಾರುತ್ತಿದ್ದರು. ಬಾವಿ ಎಷ್ಟು ಜನ ಹೆಂಗಸರನ್ನು ಹಿಡಿದೀತು ಉಳಿದ ರಾಣಿಯರು ಕೋಟೆಯ ತೆನೆಯನ್ನೇರಿ ಕಂದಕದ ಪಾಲಾಗುತ್ತಿದ್ದರು. ಇಷ್ಟು ಮಾತ್ರವಲ್ಲ ಯುದ್ದ ಸಾವು ನೋವು ಕುರಿತಾದ ನಡುಕದಿಂದ ಕಣ್ಣು ಮುಚ್ಚಲಾಗದ ಸೈನಿಕರನ್ನು ಆ ನಡುಕದಿಂದ ಪಾರಾಗಲೆಂದು ಸೂಳೆಯರ ಮೋಜಿನಲ್ಲಿ ಮುಳುಗಿಸುತ್ತಿದ್ದರು. ನಾಳೆ ಸಾಯುತ್ತೇನೆ, ಇಂದೇ ಹೆಣ್ಣಿನ ಬೆತ್ತಲೆ ಸರ್ವಸ್ವವನ್ನು ಹೀರಿಬಿಡಬೇಕೆಂಬ ತೀವ್ರ ಬಾಯಾರಿಕೆಯಲ್ಲಿರುತ್ತಿದ್ದರು.

ದಳವಾಯಿಯ ನೆರೆಮನೆಯ ಸಿಪಾಯಿಯ ಹೆಂಡತಿ ಮಾತ್ರ ಈ ಎಲ್ಲ ಹೆಣ್ಣುಮಕ್ಕಳ ಅಳಲಿಗೆ ದನಿಯಾಗುತ್ತಾಳೆ. 'ಗಂಡಂದ್ರು ತೀರ್ಕಂಡ್ರು ಆಂದ್ರೆ ಹೆಂಡ್ರು ಬಾವಿಗೋ, ಬೆಂಕಿಗೋ ಬಿದ್ರ ಸರಿಯಪ್ಪ. ಅದು ನೆಮ್ಮದಿ. ಮುಂಡೆರಾಗಿ ಬದುಕಿದ್ರೆ ಅವರ ಯಾರ್‌ತಾನೆ ಕೇಳಬೇಕು. ಅವಳು ಜನ ತಿಳಿಯುವಂತ ಕಸ. ನಾವು ಹೆಂಗಸರು ಪಿರಂಗಿ ಸದ್ದು ಕೇಳನೋ, ಹುಲಿ ಅರಚಾಟ ಕೇಳನೋ, ಸಾಯುವಂತ ಸಿಪಾಯಿಗಳ ನರಳಾಟ ಕೇಳಾನೋ, ಇದೆಲ್ಲ ಕೇಳುಸ್ಕೊಂಡು ಮನೆ ತೊಟ್ಟಿಲ ಒಳಗೆ ಬೆಚ್ಚಿ ಬೀಳುವಂತ ಕೂಸನ್ನು ಸಮಾಧಾನ ಮಾಡೋದೆಂಗೆ. ಲಡಾಯಿಯಲ್ಲಿ ನಿಂತು ಹೊಡೆದಾಡುವವರಿಗೆ ಮಾತ್ರ ಈ ಯಾವ ಸದ್ದು ಕೇಳ್ಸಲ್ಲವಲ್ಲ' ಎನ್ನುತ್ತಾಳೆ ಇದು ಸಾಮಾನ್ಯ ಸ್ತ್ರೀಯೊಬ್ಬಳು ತನ್ನ ಗಂಡನನ್ನು ಕಳೆದುಕೊಂಡು ಪರಿತಪಿಸುವ ಬಗೆಯಾಗಿದೆ. ಇತ್ತ ಸಾಯಲೂ ಆಗದೇ ಅತ್ತ ಬದುಕಲೂ ಆಗದೇ ಜೀವಂತ ಹೆಣವಾಗಿ ಬದುಕೆಲ್ಲಾ ಬೇಯುವ ಸ್ಥಿತಿ ಇವರದಾಗಿದೆ. 'ನಾವೆಲ್ಲ ಬದುಕಿರುವಾಗಲೆ ಸಮಾಧಿಯಾಗುವವರು ರಾತ್ರಿ ಕಲ್ಲು ಕರಗಿದಂತೆ. ರಕ್ತ ಸುರಿಯದನ್ನ

ಮಂದಿ ಸಾಯೋದನ್ನು ಕಂಡು ನಾ ಗೆದ್ದೆ ನಾ ಗೆದ್ದೆ ಅನ್ನುವವರು ಕರಗದುಂಟ ದಳವಾಯಿ'. ಎಂಬ ಅವಳ ಮಾತು ಮನ ಕಲಕುತ್ತದೆ. ಮನುಷ್ಯತ್ವವನ್ನು ಕಳೆದುಕೊಂಡ ಯುದ್ಧನೀತಿಯನ್ನು ಉದ್ದೇಶಿಸಿ ಅವಳು ಆಡುವ ಮಾತು ಸರ್ವಕಾಲಿಕವಾದುದು. ಸಾಮ್ರಾಜ್ಯ ಸಾಧನೆಗಿಂತ ದೇವನೂರು ಮಹದೇವ ಹೇಳುವಂತೆ 'ಸಂಬಂಧ' ಎನ್ನೋದು ದೊಡ್ಡದು. ಆದರೆ ಹಿಂಸೆಯಲ್ಲೆ ಇರುವ ನಮಗೆ ಮನುಷ್ಯ ಸಂಬಂಧದಲ್ಲಿರುವ ಆನಂದ ಕಾಣಿಸುವುದಿಲ್ಲ.

ಪ್ರಾಚೀನ ಕಾಲದಿಂದಲೂ ಹೆಣ್ಣನ್ನು ಗಂಡು ಶೋಷಿಸುತ್ತಿದ್ದಾನೆ ಎಂಬುದರ ಸಂಕೇತವೇ ಸತಿ ಪದ್ಧತಿ ಹನೂರರ ಪ್ರಸಕ್ತ ಕಾದಂಬರಿಯಲ್ಲಿ ಯುದ್ಧದಲ್ಲಿ ಮಡಿದ ಸೈನಿಕನೊಬ್ಬನ ಮಡದಿಯನ್ನು ಸತಿಯಾಗುವಂತೆ ಜಬರ್‌ದಸ್ತಿ ಮಾಡಲಾದ ಚಿತ್ರಣವಿದೆ. ಇಲ್ಲಿ ಸೈನಿಕನ ಮಡದಿಯನ್ನು ಸತ್ತ ಗಂಡನ ಆತ್ಮಕ್ಕೆ ಸೇರಿಸಲು ಬೆಂಕಿಯ ಕುಂಡವನ್ನು ಸಿದ್ಧಪಡಿಸಿ ಅದರಲ್ಲಿ ಅವಳನ್ನು ಎಸೆಯಲು ಸಿದ್ಧವಾಗುತ್ತಾರೆ. ಆದರೆ ಆಕೆ ಮಾತ್ರ ಕೈಯಲ್ಲಿ ಕಠಾರಿ ಹಿಡಿದು ಎಲ್ಲರನ್ನು ಎದುರಿಸಿ ತನ್ನ ದಾರಿ ತಾನು ಕಂಡುಕೊಳ್ಳುತ್ತಾಳೆ. ಹನೂರು ಇಲ್ಲಿ ಹೆಣ್ಣಿಗೆ ಸ್ಥೈರ್ಯವನ್ನು ನೀಡಿರುವುದು ಸಕಾರಾತ್ಮಕ ಸಂಗತಿ.

ತನ್ನ ಕೊನೆ ಘಳಿಗೆಯನ್ನು ಕಾಯುತ್ತಾ ಇರುವ ಸಿಪಾಯಿಗೆ ಒಂದು ವೇಳೆ ತಾಯಿ ಬದುಕಿದ್ದರೇ ತನ್ನ ಜೀವನ ಕ್ರಮವೇ ಬದಲಾಗುತ್ತಿತ್ತೇ? ಎಂಬ ವಿಚಾರ ಮನದಲ್ಲಿ ಮೂಡುತ್ತದೆ. ತಾಯಿಯ ಅಂತಃಕರಣವಿಲ್ಲದೆ ಬೆಳೆದಾತ ತನ್ನಲ್ಲೆ ದುಷ್ಕೃತ್ಯಗಳನ್ನು ಮನ್ನಿಸಿ ಸಲಹಿದ ಪ್ರಕೃತಿಗೆ ನಮನಗಳನ್ನು ಸಲ್ಲಿಸುತ್ತಾನೆ. ತನ್ನಲ್ಲ ದುಷ್ಕೃತ್ಯಗಳಿಗೆ ತಂದೆಯ ಕಟುಕ ವೃತ್ತಿಯೇ ಕಾರಣವಿರಬಹುದೇ ಎಂದು ಚಿಂತಿಸುತ್ತಾನೆ. ತನ್ನ ತಂದೆಯಲ್ಲಿ ಕಾಣದ ಪ್ರೀತಿ ವಾತ್ಸಲವನ್ನು ಹುಟ್ಟುತ್ತಲೇ ಮುಖವನ್ನೆ ಕಂಡಿರದ ತಾಯಿಯಲ್ಲಿ ದಳವಾಯಿ ನಿರೀಕ್ಷಿಸುತ್ತಾನೆ.

ಸಾಮಾನ್ಯ ಜನರ ಸ್ಥಿತಪ್ರಜ್ಞ ಮನಸ್ಥಿತಿ ಹಾಗೂ ಅವರಲ್ಲಿರುವ ಮಾನವಿಯತೆ ಕುರಿತು ಹಲವು ನಿದರ್ಶನಗಳನ್ನು ಕಾದಂಬರಿಯುದ್ದಕ್ಕು ನೀಡಿದ್ದಾರೆ. ಇದು ಸೈನಿಕನ ಆತ್ಮಕಥೆಯಾಗಿ ಉಳಿಯದೆ ಯುದ್ಧಕಾಲದಲ್ಲಿ ದಮನಿತ ಹೆಣ್ಣುಮಕ್ಕಳ ದುರಂತ ವ್ಯಥೆಯ ಕಥೆಯಾಗಿ ಕಾಣಿಸಿಕೊಳ್ಳುತ್ತದೆ. ಸಮಾಜದಲ್ಲಿ ಸ್ವಲ್ಪದರಲ್ಲಿಯೇ ತೃಪ್ತಿಕಾಣುತ್ತ ಬದುಕುತ್ತಿರುವ ಜನಸಾಮಾನ್ಯರು ತಮಗಿಂತಲೂ ಲೋಕ ಹಿತಕ್ಕಾಗಿ ತುಡಿಯಬೇಕಾದ ಅಗತ್ಯತೆಯನ್ನು ತಿಳಿಸಿದ್ದಾರೆ.

ಕಾದಂಬರಿಯಲ್ಲಿ ದಳವಾಯಿ ತಾನು ಗಂಡು ಎಂಬ ಕಾರಣಕ್ಕೆ ತನ್ನ ಹೆಂಡತಿಯನ್ನು ಕೀಳು ಮಟ್ಟದಲ್ಲಿ ಕಾಣುವ ಅಸಮಾನತೆಯಾಗಲೀ, ಗೆದ್ದ ಸೈನ್ಯ ಸೋತ ರಾಜನ ರಾಣಿಯರ ಮತ್ತು ಸೈನಿಕರ ಹೆಂಡಿರ ಮೇಲಿನ ಲೈಂಗಿಕ ಅತ್ಯಾಚಾರವಾಗಲೀ ಅದು ಹೈದರ್, ಟಿಪ್ಪು ದಳವಾಯಿಯ ಅಂತ್ಯದೊಂದಿಗೆ ಕೊನೆಗೊಂಡಿಲ್ಲ. ಹೆಣ್ಣಿನ ಮೇಲೆ ನಡೆಯುತ್ತಿರುವ ಇಂತಹ ಲಿಂಗಾಧಾರಿತವಾದ ಅಸಮಾನತೆ ಅತ್ಯಚಾರಗಳೂ ಇವತ್ತಿಗೂ ಜೀವಂತವಿದೆ. ಮಂಗಳನಲ್ಲಿ ಮನೆ ಮಾಡಬೆಂಕೆಂದು

ಹೊರಟಿರುವ ಇವತ್ತಿನ ಆಧುನಿಕ ಯುಗದಲ್ಲಿ ಹೆಣ್ಣು ಇನ್ನೂ ನಾಲ್ಕು ಗೋಡೆಗಳ ಗೃಹಬಂಧನದಲ್ಲೆ ಜೀವನ ನೂಕುತ್ತಿದ್ದಾಳೆ. ಸಮಾಜಿಕ ಸಮಾನತೆಯ ಮಾತನಾಡುವ ನಮ್ಮ ಆಧುನಿಕ ಪ್ರಜಾಪ್ರಭುತ್ವದ ಸರ್ಕಾರಗಳು ಇಂದಿಗೂ ದಳವಾಯಿಯಂತಹ ದೂರ್ತ ವ್ಯಕ್ತಿಗಳಿಂದ ಹೆಣ್ಣು ಅನುಭವಿಸುತ್ತಿರುವ ದೌರ್ಜನ್ಯವನ್ನು ತಡೆಯಲಾಗದೆ ಕೈ ಚೆಲ್ಲಿ ಕುಳಿತಿವೆ.

---

ಅಡಿಟಿಪ್ಪಣಿ :

೧ ಡಾ॥ ಮಮತಾರಾವ್, "ಲೇಖನ-'ಅಜ್ಞಾತನೊಬ್ಬನ ಆತ್ಮಚರಿತ್ರೆ ಒಂದು ಸ್ತ್ರೀ ನೋಟ', ಪುಟ-೦೨.

## ಅಧ್ಯಾಯ : ೫

# ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ವಿಮರ್ಶಾತ್ಮಕ ಅಧ್ಯಯನ

ಕೃಷ್ಣಮೂರ್ತಿ ಹನೂರರ ಮೂರನೇ ಕಾದಂಬರಿಯಾದ 'ಅಜ್ಞಾತನೊಬ್ಬನ ಆತ್ಮಚರಿತ್ರೆ' ವಿಮರ್ಶಕರ ಮೆಚ್ಚುಗೆಯನ್ನು ಪಡೆದ ಶ್ರೇಷ್ಠ ಕೃತಿಯಾಗಿದೆ. ಈ ಕಾದಂಬರಿಯನ್ನು ಕುರಿತು ವಿಭಿನ್ನ ನೆಲೆಯಲ್ಲಿ ಅನೇಕ ವಿದ್ವಾಂಸರು ಚರ್ಚೆ ನಡೆಸಿದ್ದಾರೆ. ಪ್ರಸ್ತುತ ಅಧ್ಯಯನದ ದೃಷ್ಟಿಯಿಂದ ಹನೂರರ ಈ ಕಾದಂಬರಿಯನ್ನು ವಿಮರ್ಶಾತ್ಮಕ ಶೈಲಿಯಲ್ಲಿ ವಿಶ್ಲೇಷಣೆಗೆ ಒಳಪಡಿಸಲಾಗಿದೆ.

ಅಧ್ಯಯನದ ದೃಷ್ಟಿಯಿಂದ ಕಥಾವಸ್ತುವನ್ನು ಮೊದಲು ಆಯ್ದುಕೊಂಡು ಅವುಗಳನ್ನು ವಿಮರ್ಶಾತ್ಮಕವಾಗಿ ವಿಶ್ಲೇಷಣೆಗೆ ಒಳಗುಪಡಿಸಿ, ನಂತರ ಕಾದಂಬರಿಯಲ್ಲಿ ಬರುವ ಪಾತ್ರಗಳನ್ನು ಸನ್ನಿವೇಶ ಘಟನೆಗಳನ್ನು ಆಧರಿಸಿ ಚರ್ಚಿಸುವುದು ಯುಕ್ತವಾಗಿದೆ.

### ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ಕಥಾವಸ್ತು :

ಕಾದಂಬರಿಯ ಕಥಾವಸ್ತು ಅಜ್ಞಾತನೊಬ್ಬನ ಆತ್ಮಚರಿತ್ರೆ, ಈ ಅಜ್ಞಾತ ಯಾರು? ಅವನ ಹೆಸರೇನು? ಎಂದು ಎಲ್ಲಿಯೂ ನಮೂದಿಸದೆ ಕಥೆಯನ್ನು ಹೆಣೆದಿರುವುದು ಒಂದು ವಿಶೇಷವಾಗಿದೆ. ಅನಾಮದೇಯ ದಳವಾಯಿಯೊಬ್ಬನ ಬದುಕಿನ ಪಡಿಪಾಟಲು ಈ ಕಾದಂಬರಿಯ ಪ್ರಮುಖ ವಸ್ತು. ಕಾದಂಬರಿಯ ಕಥೆಯ ಪ್ರಾರಂಭವೂ ಸೊಗಸಾಗಿದೆ. 'ಮಲೆಯಮಾದಯ್ಯನ ಅರಣ್ಯ ಸೀಮೆಯ ಸೆರಗಿನಲ್ಲಿ ಕಾವೇರಿಪುರವಿದೆ. ಅಲ್ಲೊಂದು ತೋಪು. ಅದರ ಪಕ್ಕದಲ್ಲಿ ಸಂತನೊಬ್ಬನ ಸಮಾಧಿ ಮಂಟಪ. ಅಲ್ಲಿ ಒಂದು ವೀರಗಲ್ಲಿದೆ.' ಪ್ರಸ್ತುತ ಕಾದಂಬರಿ ಶುರುವಾಗುವುದೇ ಈ ವೀರಗಲ್ಲೊಂದರ ಪೂರ್ವಕಥಾ ವಿವರದಿಂದ. ಈ ವೀರಗಲ್ಲಿನ ಕುರಿತು ಮಾಹಿತಿ ನೀಡುವ ದಫ್ತರೊಂದು ಅದೇ ಗ್ರಾಮದಲ್ಲಿ ದೊರೆಯುತ್ತದೆ. ಇದರಲ್ಲಿ ಟಿಪ್ಪುಸುಲ್ತಾನ ತೀರಿಕೊಂಡ ವರ್ಷದಲ್ಲೆ ಈ ಕುದುರೆ ದೇಶಿಗಯ್ಯನೂ ಸಾವನಪ್ಪಿದ ವಿವರವೂ ಸಿಗುತ್ತದೆ.

ಟಿಪ್ಪುಸುಲ್ತಾನನ ಕೊನೆಯ ದಿನಗಳು ಅಷ್ಟೇನೂ ಚೆನ್ನಾಗಿರಲಿಲ್ಲ. ಸಿಪಾಯಿಗಳೆಲ್ಲ ಬ್ರಿಟಿಷ್ ಸೈನ್ಯದೊಡನೆ ಹೋರಾಡಿ ಹೈರಾಣಾಗಿದ್ದರು. ಸೈನ್ಯ ಸೇರಲು ಯಾರೂ ತಯಾರಿರಲಿಲ್ಲ. ಅಂತಹ ಸಂಕಷ್ಟದ ಕಾಲದಲ್ಲಿ ಟಿಪ್ಪು ಖಾವಂದರು ದಳವಾಯಿಯನ್ನು ಅರಮನೆಗೆ ಕರೆಸುತ್ತಾರೆ. ಟಿಪ್ಪುಸುಲ್ತಾನನನಿಗೆ ಹುಲಿಗಳೆಂದರೆ ಮೋಹ ಹುಲಿ ಬೇಟೆಯಾಡಿದ ನಾಯಕರನ್ನು ಊರೊಳಗೆ ಮೆರವಣಿಗೆ ಮಾಡಿಸುತ್ತಿದ್ದ. ಜೀವಂತ ಹುಲಿಗಳನ್ನು ಹಿಡಿದುತರಬೇಕೆಂದು ಆಜ್ಞೆ ಮಾಡಿದ್ದಕ್ಕೆ ದಳವಾಯಿ ಒಪ್ಪಿಬಿಡುತ್ತಾನೆ. ಲಡಾಯಿಯಲ್ಲಿ ಬಡದಾಡಿದರೆ ಒಂದೇ ಏಟಿಗೆ ತಲೆ ಒಡೆಯುತ್ತದೆ.

ಆದರೆ ಹುಲಿಬೇಟೆ ಎಂದರೆ ಅರ್ಧ ಸತ್ತು ಅರ್ಧ ಬದುಕಿದಂತೆ. ಸಂಸಾರಕ್ಕೆ ಕುತ್ತಾಗುವ ಕಾಯಕವೆಂದು ಗೊತ್ತಿದ್ದೂ ಅದರಲ್ಲಿ ಆತ ಯಶಸ್ಸು ಸಾಧಿಸಿ ಖಾವಂದರ ಪ್ರೀತಿಗೆ ಪಾತ್ರನಾಗುತ್ತಾನೆ. ಬಾದಶಹರ ಬೆವರುಬಿದ್ದ ಜಾಗದಲ್ಲಿ ರಕ್ತ ಚೆಲ್ಲುವ ತವಕದಲ್ಲಿದ್ದ ದಳವಾಯಿ ಸಿಂಹಾಸನದ ಗದ್ದುಗೆಗೆ ಹತ್ತಿರವಾದ ಘನ ಹುದ್ದೆಯನ್ನು ಗಿಟ್ಟಿಸುವ ಯತ್ನವನ್ನು ನಡೆಸಿದ್ದ. ಸುಲ್ತಾನರಿಗೆ ಅವನಲ್ಲಿ ಬಲವಾದ ನಂಬಿಕೆಯಿತ್ತು. ದಳವಾಯಿಯ ಕಲಿತನ ರಣೋತ್ಸಾಹವನ್ನು ಕಂಡು ಮೆಚ್ಚಿಕೊಂಡಿದ್ದ ಸುಲ್ತಾನರು ದಳವಾಯಿ ಎಸಗುತ್ತಿದ್ದ ತಪ್ಪುಗಳನ್ನು ಕಂಡೂ ಕಾಣದಂತೆ ಇದ್ದರು.

ದಳವಾಯಿಯ ತಂದೆ ದೂರದೂರಿನಿಂದ ಬಂದು ಶ್ರೀರಂಗಪಟ್ಟಣದಲ್ಲಿ ಅರಮನೆಯ ಸೇವೆಗೆ ಸೇರಿಕೊಂಡಿದ್ದ. ಹೈದರಾಲಿಖಾನ್ ತಪ್ಪಿತಸ್ಥರಿಗೆ ವಿದಿಸುತ್ತಿದ್ದ ಶಿಕ್ಷೆಗಳನ್ನು ನೆರವೇರಿಸುವುದು ಆತನ ಕಾಯಕ. ಅಪರಾಧಿಗಳಿಗೆ ನೀಡುತ್ತಿದ್ದ ಶಿಕ್ಷೆಯನ್ನು ನೋಡಿ ಬೆಳೆದವ ದಳವಾಯಿ. ಆತ ತಾಯಿ ಪ್ರೀತಿ ವಾತ್ಸಲ್ಯದಿಂದ ವಂಚಿತನಾಗಿದ್ದ. ಯಾವ ಅಧರ ಅನುಪಾನವೂ ಕಾಣದೆ ಬೆಳೆದು ದೊಡ್ಡವನಾಗುತ್ತಾನೆ. ಓದಿದ ಮಠದಲ್ಲಿಯೂ ಕಳ್ಳತನ, ಜಗಳ, ಹೊಡೆದಾಟದಲ್ಲಿ ಮುಂದಿದ್ದ ದಳವಾಯಿ ಕ್ರಮೇಣ ಬೀದಿ ಸುತ್ತಿ ಕಳ್ಳಾಟ ನಡೆಸುತ್ತಾ ದಿನ ನೂಕುತ್ತಿದ್ದ. ತಂದೆಯನ್ನು ಶತ್ರುವೆಂದೇ ಭಾವಿಸಿ ಆತ ಹೇಳಿದ ಯಾವ ಮಾತು ಕೇಳಬಾರದೆಂದು ನಿರ್ಧಾರಕ್ಕೆ ಬರುತ್ತಾನೆ. ಮದುವೆಯಾದರೆ ಮಗ ಸುಧಾರಿಸಿಯಾನು ಎಂದು ತಿಳಿದ ತಂದೆ ಆತನಿಗೆ ಹೆಣ್ಣು ತಲಾಷು ಮಾಡತೊಡಗಿದ. ಆದರೆ ಯಾರೂ ಹೆಣ್ಣು ಕೊಡಲು ಮುಂದಾಗಲಿಲ್ಲ. ಅರಮನೆಯ ಕಟುಕರಿಗೆ ಕೂಸು ಕೊಡುವುದು ಯಾರಿಗೂ ಬೇಡವಾಗಿತ್ತು. ದಳವಾಯಿಗೆ ಬಡ ಹೆಣ್ಣು ಮಗಳೊಂದಿಗೆ ಮದುವೆ ನೆರವೇರಿತು. ಇದೇ ಹೊತ್ತಿಗೆ ಆತ ಅರಮನೆಯ ಸೈನ್ಯ ಸೇರಿಕೊಂಡ. ಕಾಮುಕನಾಗಿದ್ದ ದಳವಾಯಿ ಅರಮನೆಯ ಕೆಲಸಕ್ಕೆ ಸೇರಿದ ಮೇಲೆ ಹೆಂಗಸರೊಂದಿಗೆ ಮತ್ತಷ್ಟು ಅಡಾವುಡಿ ಆಟದಲ್ಲಿ ತೊಡಗಿದ. ಕಟ್ಟಿಕೊಂಡ ಹೆಂಡತಿಯ ಕಡೆಗೆ ಗಮನ ಕೊಡಲಿಲ್ಲ. ಯೌವನದಲ್ಲಿ ದಳವಾಯಿ ಕ್ರೂರಿಯೂ ಸಾಹಸಿಯೂ ಆಗಿದ್ದ. ಆತ ಜೀವನಪರ್ಯಂತ ಹೀನಕೃತ್ಯಗಳನ್ನೆ ನೆರವೇರಿಸಿಕೊಂಡು ಬಂದವನು. ಯುದ್ಧದಿಂದ ವಾಪಸಾಗುವಾಗ ಹೊತ್ತುತಂದ ಲೂಟಿ ಹಾಗೂ ಹೆಂಗಸರ ಲೆಕ್ಕ ತಪ್ಪಿಸಿ ಸುಖಿಸುತ್ತಿದ್ದ.

ಸ್ತ್ರೀಲಂಪಟ, ಕಲ್ಲು ಹೃದಯಿ ದಳವಾಯಿಯು ಒಮ್ಮೆ ಕಂದಾಯ ವಸೂಲಿಗೆಂದು ಹೋದವ. ದಾಸಯ್ಯನೊಬ್ಬನ ಮಗಳನ್ನು ಕಂಡು ಮೋಹಗೊಂಡು ಅವಳನ್ನು ಪಡೆಯಲು ಮೊದಲ ಬಾರಿಗೆ ತೆರ ಕೊಟ್ಟು ಮನೆಗೆ ಕರೆದುಕೊಂಡು ಬರುತ್ತಾನೆ. ತನ್ನಂತ ತಿರುಪೆಯವಳಿಗೆ ದಳವಾಯಿಯಂತ ಸಂಬಂಧ ಸಿಕ್ಕಿದ್ದು ತನ್ನ ಸೌಭಾಗ್ಯವೆಂದು ಅವಳು ತಿಳಿಯುತ್ತಾಳೆ. 'ದಳವಾಯಿ ನನಗೆ ಒಪ್ಪೊತ್ತು ಊಟ ಒಂದು ಅರಿವೆಯನ್ನು ಕರುಣಿಸನೇ' ಚೆನ್ನಾಗಿ ನೋಡಿಕೊಳ್ಳುವನೆಂಬ ಕನಸು ಕಾಣುತ್ತಾಳೆ. ಆದರೆ ದಳವಾಯಿಗೆ ಅವಳಂತವಳು ಇನ್ನೊಂದು ರಖಾವು ಅಷ್ಟೆ. ಅವಳನ್ನು ಕಿತ್ತೋದ ವಪ್ಪಾರೆಗೆಯಲ್ಲಿರಿಸಿ ಸುಖ ಅನುಭವಿಸುವ ತೊತ್ತಾಗಿ ಕಾಣುತ್ತಾನೆ. ಆಕೆಯೋ ಮಹಾಸ್ವಾಭಿಮಾನಿ.

ಅವನ ಪ್ರೇಮದ ನಾಟಕ ಬೂಟಾಟಿಕೆಗಳನ್ನೆಲ್ಲಾ ಅರಿತವಳಂತೆ ನಿನ್ನ ಅರಮನೆಯೆಲ್ಲ ಕಿತ್ತು ತೂತು ಬಿದ್ದಿದೆಯಲ್ಲ ಕೂರಿಸಿಕೊಂಡು ಬಂದದ್ದೇನೋ ಕುದುರೆಯಲ್ಲಿ, ತೋರಿಸುತ್ತಿರುವುದು ಕಿತ್ತ ವಪ್ಪಾರೆಯನ್ನು ಎಂದು ಹೀಯಾಳಿಸುತ್ತಾಳೆ. ಎಲ್ಲಿಯಾದರು ಗುಡಿಗೆ ಕರಕೊಂಡು ಹೋಗಿ ತನ್ನ ಕೊರಳಿಗೆ ತಾಳಿ ಕಟ್ಟಬೇಕೆಂದು ಪರಿಪರಿಯಾಗಿ ಕೇಳಿಕೊಳ್ಳುತ್ತಾಳೆ. ಹೃದಯ ಹೀನನಾದ ಆತನಿಗೆ ಆಕೆ ಅಲ್ಪಕಾಲದ ರಖಾವು ಮಾತ್ರ. ಅವನ ಅಸಡ್ಡೆಯನ್ನು ಗಮನಿಸಿ ಸಿಟ್ಟಾದ ಆಕೆ ಒಂದು ದಿನ ತಾನು ಬೆತ್ತಲೆ ಊರೆಲ್ಲಾ ಸುತ್ತಾಡುತ್ತ ಆತನ ಮಾನ ಕಳೆಯುವ ಧಮಕಿ ಹಾಕುತ್ತಾಳೆ. 'ಎಲೆ ಸಿಪಾಯಿ ನಿನ್ನ ಅರಮನೆಯಲ್ಲಿ ನ್ಯಾಯದ ಘಂಟೆ ಇರುವುದೇನಲೇ, ಇದ್ದರೇ ಆ ಘಂಟೆಗೆ ನಾಲಗೆ ಉಂಟಾ? (ಪು.೩೮) ಎನ್ನುವ ಸವಾಲೆಸೆದು ಆತನನ್ನು ಚಕಿತಗೊಳಿಸುತ್ತಾಳೆ. ಯಾವ ಹೆಣ್ಣು ಅವನನ್ನು ಇಷ್ಟು ಕಾಡಿದವಳಲ್ಲ. ಯಾವ ಹೆಣ್ಣನ್ನು ಆತ ಕಾಸು ಸುರಿದು ತಂದವನಲ್ಲ. ಕಾಸಿನ ಕ್ರಯಕ್ಕೆ ತಂದ ಈ ಮೂರು ಕಾಸಿನ ಹೆಂಗಸಿನ ರಕ್ತವೇ ಇಷ್ಟು ಬಿಸಿಯಾಗಿರಬೇಕಾದರೆ ಇನ್ನು ರಕ್ತ ಚೆಲ್ಲುವ ನನ್ನ ನೆಣಗೊಬ್ಬು ಇನ್ನೆಷ್ಟು ತೂಕದ್ದಿರಬಹುದು ಎಂದು ಆತನ ಆಹಂ ತಲೆ ಎತ್ತುತ್ತದೆ. ದಳವಾಯಿ ಅಂದೇ ರಾತ್ರಿ ಆ ಮೂರು ತಿಂಗಳ ಬಸುರಿಯನ್ನು ಕೊಂದು ಅವಳ ಹೆಣವನ್ನು ಕಾವೇರಿಯ ನಡುಮಧ್ಯದ ನೀರಿಗೆಸೆಯುವ ಸಂಚು ಮಾಡುತ್ತಾನೆ. ಆದರೂ ಮನದ ಮೂಲೆಯಲ್ಲಿ ಆಕೆಯನ್ನು ಕೊಲ್ಲುವುದು ಬೇಡ. ಎಷ್ಟೇ ಭಂಡಾಟವಾದರೂ ಅವಳನ್ನು ಬದುಕಲು ಬಿಟ್ಟು ತನ್ನ ಸನಿಹದಲ್ಲಿರಿಸಿಕೊಳ್ಳಬೇಕು ಎಂಬ ಬಯಕೆಯೂ ಮೂಡುತ್ತದೆ. ಆದರೆ ಈಕೆ ಅವನಿಗಿಂತ ಒಂದು ಹೆಜ್ಜೆ ಮುಂದಾಗಿ ಅವನ ಕತ್ತಿಯೊಂದಿಗೆ ರಾತ್ರೋರಾತ್ರಿ ತಪ್ಪಿಸಿಕೊಳ್ಳುತ್ತಾಳೆ. ದಳವಾಯಿ ಈ ಸುದ್ದಿ ಅರಮನೆಯ ಮುಂದೆ ಬಂದರೆ ತನ್ನ ಮರ್ಯಾದೆಗೂ ಉದ್ಯೋಗಕ್ಕೂ ಕಲ್ಲು ಬೀಳುತ್ತದೆಂದು ಭಯಪಟ್ಟು ಆಕೆಯನ್ನು ಹುಡುಕಿ ಎಲ್ಲೂ ಕಾಣದೆ ಇರಲು ಸಮಾಧಾನ ಪಟ್ಟುಕೊಳ್ಳುತ್ತಾನೆ.

ಹೈದರಾಲಿಯ ಸೈನ್ಯಕ್ಕೆ ಸೇರಿದ ದಳವಾಯಿ ಇಪ್ಪತ್ತು ವರ್ಷ ಯುದ್ಧ ದೊಂಬಿ ಹೊಡೆದಾಟಗಳಲ್ಲಿ ಪಾಲ್ಗೊಂಡು ದೊರೆಗಳ ಖಾಸಾ ಭಂಟನಾಗಿದ್ದ. ಅವನ ಧೈರ್ಯಕ್ಕೆ ಮೆಚ್ಚಿದ ಟಿಪ್ಪೂ ಖಾವಂದರರು ಹೊಸ ಜವಬ್ದಾರಿಯನ್ನು ವಹಿಸುತ್ತಾನೆ. ಧರ್ಮ ಗಲಭೆ ಅಡಗಿಸಲು ಹೊರಟವನು ಹೋದದ್ದೆ ಬೇರೆಡೆಗೆ. ಟಿಪ್ಪೂ ಖಾವಂದರ ಆಜ್ಞೆ ಹೊತ್ತು ಸಿಪಾಯಿಗಳೊಂದಿಗೆ ಕಲಹ ತಣಿಸಲು ಹೊರಟ ದಳವಾಯಿ ಮಾರ್ಗ ಮಧ್ಯದಲ್ಲಿ ಅವಘಡಕ್ಕೆ ಸಿಲುಕುತ್ತಾನೆ. ಜೊತೆಯಲ್ಲಿ ಬಂದ ಸೈನಿಕರು ಕೈಕೊಟ್ಟು ಚದುರಿ ಹೋಗುತ್ತಾರೆ. ಕುದುರೆಯಿಂದ ಜಾರಿಬಿದ್ದು ಗಾಯಗೊಂಡ ದಳವಾಯಿ ತನ್ನ ಸಿಪಾಯಿ ಶಕ್ತಿಯನ್ನು ತಾಕತನ್ನು ಕಳೆದುಕೊಂಡು ತಲೆಮರೆಸಿಕೊಂಡು ಹಿಂದಿನದೆಲ್ಲಾ ನೆನಸಿಕೊಂಡು ಮರುಗುತ್ತಾನೆ. ಅರಮನೆಯ ಆಪತ್ತು ಅವಘಡಗಳ ಜವಾಬ್ದಾರಿ ಹೊತ್ತ ದಳವಾಯಿಯ ಕೊನೆ ದಿನಗಳು ಕಣ್ಣೀರಿನ ಗೋಳಾಗುತ್ತದೆ. ಬಹುಕಾಲ ಟಿಪ್ಪುವಿನ ನಂಬಿಕಸ್ಥನಾಗಿದ್ದ ಆತ ಕಡೆಯ ಘಳಿಗೆಯಲ್ಲಿ ಅವರ ಸಹಾಯಕ್ಕೆ ಬಾರದೇ ಹೋಗುತ್ತಾನೆ. ಕುದುರೆಯಿಂದ ಬಿದ್ದು ಗಾಯಗೊಂಡ ನಂತರ ತಲೆಮರೆಸಿಕೊಂಡು ಅನ್ನ ಆಶ್ರಯಕ್ಕಾಗಿ

ಪರದಾಡುತ್ತಾನೆ. ಹಿಂಸಾಪಶುವಾಗಿದ್ದ ಆತ ಈಗ ಹೊಟ್ಟೆ ಪಾಡಿಗಾಗಿ ಊರವರ ಕಣ್ಣಿಗೆ ಜೋಗಪ್ಪನಾಗುತ್ತಾನೆ. ನಾಲ್ಕನೆಯ ಮೈಸೂರು ಯುದ್ಧ ನಡೆದು ಟಿಪ್ಪು ಸೋತು ಮಡಿದ ಸುದ್ಧಿಯನ್ನು ತಿಳಿದು ಖಿನ್ನನಾಗುತ್ತಾನೆ. ಈಗ ಆತನಿಗೆ ಹೆಂಡತಿಯ ನೆನಪಾಗುತ್ತದೆ. ಪಾಳುಬಿದ್ದ ನರಕಸದೃಶವಾದ ಶ್ರೀರಂಗಪಟ್ಟಣಕ್ಕೆ ಬಂದು ಹೆಂಡತಿಯನ್ನು ಹುಡುಕುತ್ತಾನೆ. ನಾಳೆಯೇ ಆಕೆಯನ್ನು ಕಾವೇರಿಪುರಕ್ಕೆ ಕರೆದುಕೊಂಡು ಹೋಗಿ ಅಲ್ಲೊಂದು ಗುಡಿಸಲು ಹಾಕಿ ಇಳಿಗಾಲದಲ್ಲಿ ಹೆಂಡತಿಯೊಡನೆ ಬದುಕಬೇಕೆಂಬ ಆಸೆ ಚಿಗುರೊಡೆಯುತ್ತದೆ. ಆದರೆ ವಿಧಿಯಾಟವೇ ಬೇರೆಯಾಗಿತ್ತು. ಮನೆಗೆ ಬಾರದ ದಳವಾಯಿಯನ್ನು ಹುಡುಕಿಕೊಂಡು ಹೊರಟ ಆಕೆ ಹುಚ್ಚಿಯಾಗಿ ದಳವಾಯಿಯೇ ಹಿಡಿದು ತಂದ ಹುಲಿಗೆ ಆಹಾರವಾಗಿದ್ದಳು. ಕೊಳೆತು ನಾರುತ್ತಿದ್ದ ಅವಳ ಕಳೆಬರವನ್ನು ಮಣ್ಣು ಮಾಡುತ್ತಾನೆ. ಊರ ಮೇಲಿನವರ ದಾಸಯ್ಯನಾಗಿ ಅನ್ನಕ್ಕಾಗಿ ತಿರಿದು ತಿನ್ನುತ್ತಿದ್ದ ಆತ ತನ್ನ ನಂಬಿದವರ ಕಷ್ಟಕಾಲದಲ್ಲಿ ವೇಳವಾಳಿಯಾಗಲಿಲ್ಲ. ಜೋಳದ ಋಣ ತೀರಿಸಲಿಲ್ಲ ಎಂದು ಕಣ್ಣೀರಿಡುತ್ತಾನೆ.

ಜೀವನಪರ್ಯಂತ ತಾನೊಬ್ಬ ಪರಾಕ್ರಮಿಯೆಂದು ಭ್ರಮಿಸಿ ಹೀನಕಾರ್ಯಗಳನ್ನು ಮಾಡುತ್ತಾ ಬಂದವನು ಈಗ ಇಳಿಗಾಲದಲ್ಲಿ ಗಾಯ ಉಲ್ಬಣಿಸಿ ಅತೀವ ನೋವನ್ನು ಅನುಭವಿಸುತ್ತಾ ಪಾಳುಬಿದ್ದ ಈಶ್ವರನ ಗುಡಿಯಲ್ಲಿ ನಿರ್ಗತಿಕನಾಗಿ ಬಿದ್ದುಕೊಂಡಿರುತ್ತಿದ್ದ. ಯಾರೋ ಹೆಣ್ಣುಮಕ್ಕಳು ಅಷ್ಟಿಷ್ಟು ಅನ್ನ ಆಹಾರ ನೀಡುದಾಗ "ಭೂಮಿಯ ಮೇಲೆ ಮನುಷ್ಯ ನಿರ್ಮಿತ ಕಾರ್ಯವು ಸುರಿಸುವ ರಕ್ತದ ಜತೆಗೆ ಅವನದೇ ಇನ್ನೊಂದು ರೂಪದ ಕರುಣೆಯೂ ನಿರಂತರ ತಣ್ಣನೆ ತೀರ್ಥದಂತೆ ಪ್ರವಹಿಸುತ್ತದೆ. ಎಂಬ ಸತ್ಯದರ್ಶನವೂ ಅವನಿಗಾಗುತ್ತದೆ. ಹೆಂಡತಿಯ ಬದುಕು ಮೂರಾಬಟ್ಟೆಯಾಗಲು ನಾನೇ ಕಾರಣ ಎಂದು ಮರುಗುತ್ತಾನೆ. ಯೌವನ ಕಾಲದಲ್ಲಿ ಜೊತೆಗಿದ್ದ ಕತ್ತಿಯನ್ನು ಗುಂಡಿತೋಡಿ ಹುಗಿದು ಮಣ್ಣು ಮುಚ್ಚುತ್ತಾನೆ. 'ಎಲೈ ಆಯುಧವೇ ನನ್ನನ್ನೂ ಕೆಡವಿ ನೀನು ಮುರಿದು ಮೊಂಡಾದೆಯಲ್ಲ. ಈಗ ನೀನು ಈ ಭೂಮಿಯಲ್ಲಿ ಹೂತು ಹೋಗುತ್ತಾ ಲೋಕವನ್ನು ರಕ್ಷಿಸು" ಎಂದು ಮೊರೆಯಿಡುತ್ತಾನೆ. ಸಕಲ ಚರಾಚರಗಳೂ ಮನುಷ್ಯನೊಂದಿಗೆ ಇರುತ್ತವೆ. ಆದರೆ ನಾನು ಮಾತ್ರ ಯಾರೊಂದಿಗೂ ಇರಲಿಲ್ಲ. ಅರಮನೆಯನ್ನೆ ನಂಬಿ ನೆಚ್ಚಿಕೊಂಡು ಹಾಳಾದೆ ಎಂದು ಪರಿತಪಿಸುತ್ತಾನೆ.

### ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ಕಥಾವಸ್ತುವಿನ ವಿಮರ್ಶಾತ್ಮಕ ವಿಶ್ಲೇಷಣೆ

ಚಿತ್ರದುರ್ಗ ಪ್ರದೇಶದಲ್ಲಿ ಜಾನಪದ ಕ್ಷೇತ್ರಕಾರ್ಯ ನಡೆಸುತ್ತಿರುವ ಸಂದರ್ಭದಲ್ಲಿ ಹನೂರರ ಅರಿವಿನ ಜಗತ್ತಿನ ಮುಂದೆ ಹೊಸದಾದ ಲೋಕವೊಂದು ಅನಾವರಣಗೊಂಡಿತು. ಒಬ್ಬ ಶಿಕ್ಷಕನಾಗಿ ವಿಧ್ಯಾರ್ಥಿಗಳಿಗೆ ಪಠ್ಯಪುಸ್ತಕದಲ್ಲಿರುವ ಐತಿಹಾಸಿಕ ವಿವರಗಳನ್ನು ಬೋಧಿಸುತ್ತಿದ್ದ ಕೃಷ್ಣಮೂರ್ತಿ ಹನೂರು ಅವರಿಗೆ ಇತಿಹಾಸದಲ್ಲಿ ದಾಖಲಾಗಿರುವ ಪರಿಚಿತ ವಿವರಗಳಿಗಿಂತ ಭಿನ್ನವಾದ

ಸಂಗತಿಗಳು ಚಿತ್ರದುರ್ಗ ಪರಿಸರದಲ್ಲಿ ಗಮನಕ್ಕೆ ಬಂದು ಚಕಿತರಾದರು. ಇತಿಹಾಸವೆನ್ನುವುದು ರಾಜನ ಕಥೆಯೇ ಹೊರತು ಸಾಮಾನ್ಯನ ಕಥೆಯಲ್ಲ ಯುದ್ಧಗಳನ್ನು ಇತಿಹಾಸವು ಒಬ್ಬ ರಾಜನ ವಿಜಯದ ಸಂಕೇತವನ್ನಾಗಿ ದಾಖಲಿಸುತ್ತಾ ಬಂದಿದೆಯೇ ಹೊರತು ಸರ್ವಸಾಮಾನ್ಯನ ಬದುಕು ಯುದ್ಧದಿಂದ ನುಚ್ಚುನೂರಾಗಿ ಹೋಗುವುದರ ಕುರಿತು ಚಕಾರ ಎತ್ತುವುದಿಲ್ಲ. ರಾಜನಿಗಾಗಿ ಯುದ್ಧದಲ್ಲಿ ಸೆಣಸಾಡಿ ಮಡಿದ ವೀರ ಯೋಧರ ಇತಿಹಾಸದ ಪುಟಗಳನ್ನು ದಾಖಲಿಸುವುದಿಲ್ಲ. ಅದರಲ್ಲೂ ಯುದ್ಧದ ಸಮಯದಲ್ಲಿ ಹೆಣ್ಣು ಮಕ್ಕಳ ಮೇಲಾಗುವ ಅತ್ಯಾಚಾರಗಳು, ಅವರ ಅಸಹಾಯಕ ಆಕ್ರಂದನ ಎಲ್ಲವೂ ಅರಸರ ವಿಜಯದ ಅಟ್ಟಹಾಸದ ಅಡಿಯಲ್ಲಿ ದಮನಿಸಲ್ಪಟ್ಟಿವೆ. ಇವುಗಳನ್ನು ಅರಿತವರ ದನಿಯನ್ನು ಕೇಳುವವರಿಲ್ಲ. ರಾಜ ಮತ್ತು ಆತನ ಸೈನ್ಯವು ಜನಸಾಮಾನ್ಯರನ್ನು ರಕ್ಷಿಸುವುದಕ್ಕಿಂತಲೂ ಧ್ವಂಸ ಮಾಡಿದ ಜೀವಂತ ಉದಾಹರಣೆಗಳೇ ಹೆಚ್ಚು. ಇವುಗಳನ್ನು ಕಣ್ಣಾರೆ ಕಂಡ-ಅನುಭವಿಸಿದ ಜನಪದರು ಅರಸನಿಗೆ ನತಮಸ್ತಕರಾಗುವುದಕ್ಕಿಂತಲೂ ಲೋಕಕಲ್ಯಾಣವನ್ನು ಬಯಸುವ ಸಂತರಿಗೆ ಶರಣಾಗಿ, ಮಾನಸಿಕ ಧೈರ್ಯ ಹಾಗೂ ಶಾಂತಿ-ಸಮಾಧಾನಗಳನ್ನು ಪಡೆಯುವುದರ ಮೂಲಕ ಅವರಿಗೆ ವಿಧೇಯರಾಗಿದ್ದಾರೆ. ಹನೂರರಿಗೆ ಕ್ಷೇತ್ರಕಾರ್ಯದಲ್ಲಿ ಇದು ಸ್ಪಷ್ಟವಾಯಿತು. ಆ ಕಾರಣಕ್ಕಾಗಿಯೇ ಜನಸಾಮಾನ್ಯರನ್ನು ಕುರಿತು ಕೃತಿ ರಚಿಸಿದ್ದಾರೆ.

[೧]"ಈ ಕಾದಂಬರಿಯ ಕಥಾಹಂದರ ಟಿಪ್ಪುವಿನ ಕಾಲದ ಇತಿಹಾಸ. ಆದರೆ ಇದು ಟಿಪ್ಪುವಿನ ಏಳಿಬೀಳಿನ ಇತಿಹಾಸದ ಕಥನವಲ್ಲ. ಟಿಪ್ಪು ಹೈದರ್ ಅರಮನೆ ಶ್ರೀರಂಗ ಪಟ್ಟಣದ ಪರಿಸರ ಇಲ್ಲಿ ನೆಪ ಮಾತ್ರ, ಆ ಮೂಲಕ ಹನೂರರು ಕಟ್ಟಿಕೊಡುವ ಅನುಭವ ಜಗತ್ತೆ ಬೇರೆ."[೧] ಇತಿಹಾಸದ ಕತೆಯನ್ನು ವರ್ತಮಾನದ ಸಮಸ್ಯೆಗಳೊಡನೆ ಬೆಸೆದು ಜೀವಂತಿಕೆಯನ್ನು ಹೊಸತನವನ್ನು ನೀಡುವ ಪ್ರಯತ್ನ ಪ್ರಸ್ತುತ ಕಾದಂಬರಿಯಲ್ಲಿದೆ. ಲೋಕವೆಲ್ಲಾ ನನ್ನದೆ ಆದರೂ ಯಾವುದೂ ನನ್ನದಲ್ಲ ಎಂದು ತಿರುಗುತ್ತ ಬಂದು ಅರಣ್ಯ ಸೀಮೆಯ ಬಯಲ ಮಂಟಪದಲ್ಲಿ ನೆಲೆಸಿದ ಸಂತನ ಸಮಾಧಿ ಸ್ಥಳವೂ ವಿವಾದದ ಕೇಂದ್ರವಾಗಿ ಮತೀಯ ಗಲಭೆಗೆ ಕಾರಣ ಆಗುತ್ತಿರುವುದರತ್ತ ಲೇಖಕರು ನಮ್ಮ ಗಮನ ಸೆಳೆದಿದ್ದಾರೆ. ಇವತ್ತಿನ ರಾಜಕಾರಣ ಸಮಾಜದ ಸೌಹಾರ್ದತೆಯನ್ನು ಕದಡಿ ಬೆಂಕಿ ಹಚ್ಚುತ್ತಿದ್ದು ಈ ಬಗೆಗೆ ನಾವು ಜಾಗರೂಕರಾಗಿರಬೇಕೆಂಬ ಆಶಯ ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಹನೂರು ಸುಮಾರು ಮೂವತ್ತು ವರ್ಷಗಳ ಜಾನಪದಕ್ಕೆ ಸಂಬಂಧಿಸಿದ ತಮ್ಮ ಕ್ಷೇತ್ರಾನುಭವದಿಂದ ಪುನರ್ ಪರಿಶೀಲಿಸುವ ಪ್ರಯತ್ನದಲ್ಲಿ ಮೂಡಿ ಬಂದ ಕಾದಂಬರಿಯೇ 'ಅಜ್ಞಾತನೊಬ್ಬನ ಆತ್ಮಚರಿತ್ರೆ'. ಕನ್ನಡ ಸಾರಸ್ವತಲೋಕವನೇ ಬೆಚ್ಚಿಬೀಳಿಸುವಂತಹ ಹೊಚ್ಚಹೊಸತಾದ ವಸ್ತುವನ್ನು ತಮ್ಮ ಕಾದಂಬರಿಯನ್ನಾಗಿಸಿದ ಕೃಷ್ಣಮೂರ್ತಿ ಹನೂರರನ್ನು ಪ್ರಶಂಶಿಸಲೇಬೇಕು.

"ಕೃಷ್ಣಮೂರ್ತಿ ಹನೂರು ಅವರ ಕಾದಂಬರಿಯೂ ಟಿಪ್ಪು ಕಾಲದ ಯಾವುದೋ ಒಬ್ಬ ದಳವಾಯಿಯ ಆತ್ಮಚರಿತ್ರೆಯನ್ನು ನಮ್ಮ ಮುಂದೆ ಕೇವಲ ನಿರೂಪಿಸುವ ಸೀಮಿತ ಆಶಯವನ್ನು ಇಟ್ಟುಕೊಂಡಿಲ್ಲ, ಬದಲಾಗಿ ಇದನ್ನು ಒಂದು ನಿದರ್ಶನವಾಗಿ ಇಟ್ಟುಕೊಂಡು ಇತಿಹಾಸ ಮತ್ತು ಕಥನ ಎಂಬ ಕಲ್ಪನೆಗಳನ್ನು ಮನುಷ್ಯ ವ್ಯಾಪಾರಗಳನ್ನು ಕುರಿತ ತನ್ನದೇ ವ್ಯಾಖ್ಯಾನಕ್ಕೂ ಕೈ ಹಾಕುತ್ತದೆ." ಗಿರೀಶ ಕಾರ್ನಾಡರಂತೂ, 'ಇದು ಇತಿಹಾಸವೋ, ದಂತಕತೆಯೋ, ಜಾನಪದ ಆಖ್ಯಾಯಿಕೆಯೋ, ಕಾವ್ಯಮಯ ಕಥನವೋ ಎಂದು ವರ್ಗೀಕರಿಸಲು ಯತ್ನಿಸುವುದು ಅದರ ಶ್ರೀಮಂತ ಕ್ರಿಯಾಪರಿಸರಕ್ಕೆ ಅನ್ಯಾಯ ಬಗೆದಂತೆ ಎಂದು ಬೆರಗಾಗಿದ್ದಾರೆ. ಈ ಕಾದಂಬರಿಯ ವಸ್ತುವು ಗಿರೀಶ್ ಕಾರ್ನಾಡರು ಹೇಳುವ ಸರ್ವಕಾಲಿಕ ಸತ್ಯವಾಗಿದೆ ಎಂದು ಹೇಳಬಹುದು.

ಜೀವಂತ ಹುಲಿಯ ಸೆರೆ ಈ ಕಾದಂಬರಿಯ ಪ್ರಮುಖ ಘಟನೆಯಾಗಿದೆ. ಹುಲಿಯ ಬೇಟೆಯಾಡಿ ಜೀವಂತವಾಗಿ ಸೆರೆ ಹಿಡಿದು ತಂದವನಿಗೆ ಆರಂಭದಲ್ಲಿ ಪಂಜರದ ಹೊರಗಿನ ಹುಲಿ ಎಂಬ ಬಿರುದು ಸಿಕ್ಕರೂ ಜೀವನದ ಕೊನೆ ಘಳಿಗೆಯಲ್ಲಿ ಸಿಕ್ಕಿದ್ದು ದುರಂತದ ಉಡುಗೊರೆ. ತಾನು ಕಟ್ಟಿಕೊಂಡವಳ ಜೊತೆ ಕಡೆ ಗಳಿಗೆಯಲ್ಲಿ ಕೂಡಿ ಬಾಳಬೇಕೆಂಬ ಆವನ ಆಸೆ ನುಚ್ಚುನೂರಾಗುತ್ತದೆ. ತಾನೇ ಸೆರೆ ಹಿಡಿದು ತಂದ ಹುಲಿಯ ಬಾಯಿಗೆ ಆತನ ಹೆಂಡತಿ ಬಲಿಯಾಗುವುದು ದುರಂತವಾಗಿದೆ.

ಯುದ್ಧದ ಬಗೆಗಿನ ಸಾಮಾನ್ಯ ಜನರ ಧೋರಣೆಯನ್ನು ಕಾದಂಬರಿಯಲ್ಲಿ ಕಟ್ಟಿಕೊಡಲಾಗಿದೆ. ಹೈದರ್ ಕಾಲದಲ್ಲಿ ಅತಿ ಉತ್ಸುಕತೆಯಿಂದ ಯುದ್ಧದಲ್ಲಿ ಪಾಲ್ಗೊಳ್ಳುತ್ತಿದ್ದ ಸೈನಿಕರು ಟಿಪ್ಪುವಿನ ಆಡಳಿತದ ಹೊತ್ತಿಗೆ ಯುದ್ಧದಿಂದ ವಿಮುಕ್ತಿ ಹೊಂದಲು ಪ್ರಯತ್ನಿಸುತ್ತಿದ್ದರು. ಕೆಲವು ಸೈನಿಕರಂತೂ ತಮ್ಮ ಕುಟುಂಬದೊಡನೆ ರಾತ್ರೋರಾತ್ರಿ ಪಲಾಯನ ಮಾಡುತ್ತಿದ್ದರು. ಈ ರೀತಿಯ ಘಟನೆಗಳು ನಡೆಯಲು ಕಾರಣ ಜನಕ್ಕೆ ಈಗಾಗಲೆ ರಾಜಪ್ರಭುತ್ವದ ಮೇಲೆ ನಂಬಿಕೆ ಹೊರಟು ಹೋಗಿತ್ತು ಮತ್ತು ಯುದ್ಧದಿಂದ ಸಂಭವಿಸುವ ಅನಾಹುತಗಳ ಬಗ್ಗೆ ಅವರಿಗೆ ಅರಿವು ಮೂಡಿತ್ತು. ಯುದ್ಧದಲ್ಲಿ ಮಡಿದರೆ ವೀರಸ್ವರ್ಗ ಇತ್ಯಾದಿ ದಂತಕತೆಗಳನ್ನು ನಂಬದೆ, ಆಲೋಚನೆ ಮಾಡಿ ನಿರ್ಧಾರ ತೆಗೆದುಕೊಳ್ಳುವ ಕ್ರಮ ಆ ವೇಳೆಗಾಗಲೇ ಬೆಳೆದಿತ್ತು. ಇಷ್ಟೆಲ್ಲ ತಿಳಿದಿದ್ದರೂ ಸೈನಿಕರು ಇನ್ನೂ ಸಿಪಾಯಿಗಳಾಗಿರಲು ಕಾರಣ ಸಮಾಜದಲ್ಲಿ ಸಿಗಬಹುದಾದ ಗೌರವ, ಮರ್ಯಾದೆ. ಮತ್ತು ತಮ್ಮ ಜೀವನಕ್ರಮ ಉತ್ತಮವಾಗಿರಬೇಕೆಂದು ಅಭಿಲಾಷೆ. ಇದಕ್ಕೆ ಉದಾಹರಣೆ 'ಆಳುವವರಿಗೆ ಮಂತ್ರಿಮಾನ್ಯರಿಗೆ ಅರಮನೆಯ ಪಲ್ಲಂಗ ಸುಖವೆನಿಸಬಹುದು. ಆದರೆ ನಾವು ಅವರ ಪಲ್ಲಕ್ಕಿ ಹೊರುವ ಬಡ ಹೋರಿಗಳು. ಹಗ್ಗ ಕಟ್ಟಿಸಿಕೊಳ್ಳಬೇಕು ಭಾರ ಎಳೆಯಬೇಕು. ಮುಂಭಾರ ಹಿಂಭಾರ ಎಷ್ಟಾದರೂ ಸರಿ ಎಳೆಯದಿದ್ದರೆ ಬಾರುಕೋಲಿನ ಏಟು. ಎಷ್ಟಾದರೂ ಗಾಡಿ ಮೇಲೆ ಕೂತವನು ಯಜಮಾನ (ಪು.೧೩೭). ಇಷ್ಟೆಲ್ಲ ಸಂಗತಿಗಳು ಗೊತ್ತಿದ್ದರು ಸೈನಿಕರಾಗುವುದು ಅವನ ದುಸ್ಥಿತಿಯನ್ನು ಚಿತ್ರಿಸುತ್ತದೆ.

ಇಡೀ ಕಾದಂಬರಿ ಸಾಮಾನ್ಯ ಪುರುಷನೊಬ್ಬನ ಜೀವನ ಚರಿತ್ರೆಯನ್ನು ಹೇಳುತ್ತಲೇ ಟಿಪ್ಪು ಸುಲ್ತಾನನ ಮನಸ್ಥಿತಿ, ಜನಸಾಮಾನ್ಯರ ಬದುಕಿನ ರೀತಿ-ನೀತಿಗಳು ಹಾಗೂ ಅಂದಿನ ಕಾಲದ ಸ್ತ್ರೀಯರ ಮೇಲಿನ ದೌರ್ಜನ್ಯ ಮುಂತಾದವುಗಳ ಚಿತ್ರಣವನ್ನು ಕಟ್ಟಿಕೊಡುತ್ತದೆ. ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿ ಐತಿಹಾಸಿಕ ಹಿನ್ನೋಟವನ್ನು ಕಟ್ಟಿಕೊಡುತ್ತದೆ. ಹೈದರಾಲಿ, ಟಿಪ್ಪು ಎಂಬ ಮಾತ್ರಕ್ಕೆ ರಾಜನ ಮನೆತನವನ್ನು ವೈಭವಿಕರಿಸುವ ಪ್ರವೃತ್ತಿ ಅನೇಕ ಕೃತಿಗಳಲ್ಲಿ ಕಂಡುಬರುತ್ತದೆ. ಆದರೆ ಈ ಕಾದಂಬರಿಯಲ್ಲಿ ನಿಜವಾಗಿಯೂ ಒಬ್ಬ ರಾಜನಿಗೂ ಕೂಡ ತನ್ನ ಕುಟುಂಬ, ರಾಜ್ಯ ಇವುಗಳ ಅವನತಿಗೆ ತಾನೇ ಕಾರಣನಾದೆನಲ್ಲ ಎಂಬ ಅಳುಕು ಸದಾ ಕಾಡುತ್ತಿದ್ದುದ್ದನ್ನು ಇಲ್ಲಿ ವಿವರಿಸಲಾಗಿದೆ. ಈ ಸಾಮ್ರಾಜ್ಯ ಮೋಹ ಕಣ್ಣ ಮುಂದಿನ ಬರಿಯ ಬಯಲು. ಹೆತ್ತಮಕ್ಕಳನ್ನು ಅಡವು ಇಟ್ಟ ಘಳಿಗೆಯನ್ನು ಈ ಅರಮನೆ ಸೃಷ್ಟಿಸಿಬಿಟ್ಟಿತು. ಎಲೈ ಪುರುಷನೇ ನಿನಗೆ ಹೆಂಗಸರನ್ನು ಕೂಡುವುದರಲ್ಲಿರುವ ಮೋಹ ಮಕ್ಕಳನ್ನು ರಕ್ಷಿಸುವುದರಲ್ಲಿ ಇಲ್ಲ. (ಪು.೧೧೫) ಎನ್ನುವಲ್ಲಿ ಟಿಪ್ಪು ತನ್ನ ಇಬ್ಬರು ಮಕ್ಕಳನ್ನು ಕುಂಪಣಿಯ ಅಧಿಕಾರಸ್ಥರ ಹಿಂದೆ ಕಳಿಸಿಕೊಟ್ಟು ತನ್ನ ಮನಸ್ಸಿನ ದುಗುಡವನ್ನು ತಾಳಲಾರದೇ ಸಾಮ್ರಾಜ್ಯವನ್ನು ನಿಂದಿಸುತ್ತಾನೆ. ಮುಂದುವರೆದು 'ಅರಸನಿಗಿಂತಲೂ ಬಡತನ ಅನುಭವಿಸುವ ದರಿದ್ರರೂ ಇನ್ನಾರುಂಟು'.(ಪು.೧೧೫) ಇಲ್ಲಿ ತನ್ನ ಮಕ್ಕಳು ರಾಜ್ಯವನ್ನು ಕಳೆದುಕೊಂಡ ಸ್ಥಿತಿಯಲ್ಲಿ ಮೇಲಿನ ಮಾತುಗಳನ್ನಾಡಿದರೆ ದಾಸಯ್ಯನ ಮಗಳ ಬಾಯಲ್ಲೂ ಈ ಮಾತು ಬರುತ್ತದೆ. 'ದೇಶ ಆಳುವವರು ತಿರುಪೆಯವರೇ ಬಿಡು' (ಪು.೩೫) ಈ ಇಬ್ಬರ ಮಾತುಗಳಲ್ಲಿ ಸಂದರ್ಭದ ವ್ಯಂಗ್ಯ ಎದ್ದು ಕಾಣುತ್ತದೆ.

ಶೂರಾದಿಶೂರರೆಲ್ಲರ ಪರಾಕ್ರಮ ಕ್ಷಣಿಕ ಮಾತ್ರ, ಅದು ಎಂದೂ ಶಾಶ್ವತವಲ್ಲ. ಮದುವೆ ಮೆರವಣಿಗೆಯಲ್ಲಿ ಕುಣಿದ ಕಾರಣ ಕಾವೇರಿಪುರದಲ್ಲಿ ಜಾತ್ರೆಯ ಸಮಯ ನಡೆಯುವ ನಾಟಕದಲ್ಲಿ ದಳವಾಯಿಗೆ ಬೃಹನ್ನಳೆಯ ಪಾತ್ರ ಸಿಗುತ್ತದೆ. ಗಡ್ಡಮೀಸೆ ಬೋಳಿಸಿ ಖಾವಿ ಸೀರೆ ಉಟ್ಟುಕೊಂಡಾತ ಕೊನೆಯ ಉಸಿರಿನ ತನಕ ಅದೇ ಸೀರೆಯಲ್ಲಿರುವುದು ಒಂದು ರೀತಿಯಲ್ಲಿ ಆತನಿಗೆ ಅಜ್ಞಾತನಾಗಿರಲು ಸಹಾಯಕವಾಗುತ್ತದೆ. ಯುದ್ಧದಲ್ಲಿ ವೀರಾವೇಶದಿಂದ ಹೋರಾಡಿದ ವ್ಯಕ್ತಿಗೆ ಕಡೆಗೆ ಜೀವನದಲ್ಲಿ ಬೃಹನ್ನಳೆಯಾಗಿ ವೇಷಧರಿಸಬೇಕಾಗಿ ಬಂದದು ಈ ಕಾದಂಬರಿಯ ವಿಶೇಷ ತಂತ್ರಗಾರಿಕೆಯಾಗಿದೆ.

ತನ್ನ ಆತ್ಮಕಥೆಯ ಕೊನೆಯಲ್ಲಿ ದಳವಾಯಿ ಜೀವನಪರ್ಯಂತ ನಾನೊಬ್ಬ ಪರಾಕ್ರಮಿ ಎಂದು ಭ್ರಮಿಸಿ ಹೀನಕೃತ್ಯಗಳನ್ನು ಮಾಡಿಕೊಂಡು ಬಂದವನು ಎಂದು ಹೇಳಿ ತನ್ನ ಹೆಸರನ್ನು ಹೇಳಿಕೊಳ್ಳಲು ನಾಚಿಕೊಳ್ಳುತ್ತಾನೆ. [೩]"ಕುದುರೆದೇಸಿಗನು ತನ್ನ ಆತ್ಮಕಥೆಯಲ್ಲಿ ನಿರೂಪಿಸಿರುವ ಪ್ರಸಂಗಗಳು ನಿಜಕ್ಕೂ ವಾಸ್ತವವೂ ಅತಿಶಯೋಕ್ತಿಗಳೋ ಎಂದು ಓದುಗ ಬೆರಗಾಗುವಷ್ಟು ಅದ್ಭುತವಾಗಿವೆ. ಹಾಗಿಯೇ ಒಂದು ಅರಸೊತ್ತಿಗೆಯ ರಾಜಪ್ರಭುತ್ವದ ಸೊಕ್ಕು, ಅಟ್ಟಹಾಸ ಮತ್ತು ಅರ್ಥಹೀನ ಹಿಂಸೆಯ ಸ್ವರೂಪವನ್ನು ಕಟ್ಟುವ ರೂಪಕಗಳು ಆಗಿವೆ."[೩]

ತನ್ನ ಜೀವನದಲ್ಲಿ ದಳವಾಯಿ ಕಂಡುಕೊಳ್ಳುವ ಸತ್ಯವೆಂದರೆ ಸಂಪತ್ತು ಮತ್ತು ಅಧಿಕಾರವನ್ನು ಹೊಂದಿದ್ದ ತಾನು ಮತ್ತು ತನ್ನಂತವರು ಭಯದಿಂದ ಬೇಸರದಿಂದ ಬದುಕುವುದು. ಏನು ಇಲ್ಲದ ಸಾಮಾನ್ಯರು ತಮಗಿಂತ ಸುಖವಾಗಿ ಬದುಕುವುದು. ಇದು ದಳವಾಯಿ ಕಾವೇರಿಪುರ ಸೇರಿದ ನಂತರ ಜನಸಮಾನ್ಯರ ನೈಜ ಸುಖೀ ಬದುಕನ್ನು ಹತ್ತಿರದಿಂದ ಕಂಡ ಅವನ ಸ್ವ ಅನುಭವದ ಸತ್ಯವಾಗಿದೆ.

ಜನಸಾಮಾನ್ಯರಿಗೆ ಹಂಗಿನ ಅರಮನೆಗಿಂತ ಗುಡಿಸಲ ಗಂಜಿ ಶ್ರೇಷ್ಠವೆಂಬುದನ್ನು ಕಾದಂಬರಿಯಲ್ಲಿ ನಿರೂಪಿಸಿದ್ದಾರೆ. ಇನ್ನೊಬ್ಬರ ಸಾವಿನ ಜೊತೆ ಸರಸವಾಡುವ ಸೈನಿಕನ ಚಾಕರಿ ಅವರಿಗೆ ಬೇಕಿಲ್ಲ. ತಮ್ಮ ನೇಗಿಲ ವೃತ್ತಿಯೇ ಅವರಿಗೆ ಶ್ರೇಷ್ಠವಾಗಿದೆ. ಮದುವೆಯ ಸಂದರ್ಭದಲ್ಲಿ ಗಂಡು ಹೆಣ್ಣಿನ ಮಾತಿನ ಚಕಮಕಿ ನಡೆದು ಹೆಣ್ಣಿನ ಕಡೆಯವರು 'ಅಲ್ಲ ಗಂಡು ಕೈಲಿ ಗುದ್ದು, ಬಾಕು, ನಡುವಲ್ಲಿ ವೀರಗಚ್ಚೆ, ಮುಂಡಾಸು ಕಟ್ಟಿಕೊಂಡು ಬಂದವನೆ. ಒಳಗೆ ಮದುವೆ ಹೆಣ್ಣು ಕಿಟಕೀಲಿ ಇವನ ನೋಡಿ ಇವನು ಅರಮನೆ ಸಿಪಾಯಿ ನಾನು ಲಗ್ನ ಆಗಲ್ಲ. ನಂಗೆ ಈ ಗಂಡು ಬೇಡವೇ ಬೇಡ ಅಂತ ಒಂದೇ ಸಮನೆ ಹಠಮಾಡಿ ಕುಂತದಲವ್ವ' ಎಂದಾಗ ಗಂಡಿನ ಕಡೆಯ ಮುತ್ತೈದೆಯು 'ನಮ್ಮ ಗಂಡು ಯಾವ ಅರಮನೆಯಿಂದ ಬಂದ ಸಿಪಾಯಿನು ಅಲ್ಲ, ಗುರುಮನೆಯಿಂದ ಬಂದ ಸನ್ಯಾಸಿನೂ ಅಲ್ಲ. ಎಂಟೇರು ಹೊಲ ಉಳುವಂತ ಭಂಟ ಕಣವ್ವ' ಎಂದು ಉತ್ತರಿಸುವುದು ಸಾಮಾನ್ಯರಿಗೆ ತಮ್ಮನ್ನಾಳುವ ರಾಜನಿಗಿಂತಲೂ ರೈತಾಪಿಗಳ ಕುರಿತಾಗಿದ್ದ ಅಭಿಮಾನವು ಹೆಚ್ಚೆನ್ನುವುದು ದರ್ಶಿಸುತ್ತದೆ.

ಸಾಮಾನ್ಯ ಜನರ ಸ್ಥಿತಿಪ್ರಜ್ಞಾ ಮನಸ್ಥಿತಿ ಹಾಗೂ ಅವರಲ್ಲಿರುವ ಮಾನವೀಯತೆಯ ಕುರಿತು ಹಲವು ನಿದರ್ಶನಗಳನ್ನು ಕಾದಂಬರಿಯ ಉದ್ದಕ್ಕೂ ನೀಡಿದ್ದಾರೆ. ಹೈದರಾಲಿ ಸತ್ತ ಸುದ್ದಿಯನ್ನು ತಿಳಿಸಲು ಹೊರಟ ದಳವಾಯಿಯ ಕುದುರೆ ಕುಂಟತೊಡಗಿದಾಗ ಮಾರ್ಗದಲ್ಲಿ ಸಿಕ್ಕ ಅಲೆಮಾರಿಗಳ ಗುಂಪಿನ ಯಜಮಾನನನ್ನು ಹುಡುಕಿ 'ಆಳರಸರ ಸಾವಿನ ಸುದ್ದಿ ಹೊತ್ತು ಹೋಗುತ್ತಿದ್ದೇನೆ ಎಂದ. ಅವನು ಬಾಯ ತಂಬೂಲ ಉಗಿದು ಆಳರಸರೆಂದರೆ ಯಾರು ಎಂದ. ನಾನು ನವಾಬರು ಎಂದೆ. ನವಾಬ ಎಂದರೇನು ಎಂದು ಕೇಳಿದ, ಕಡೆಗೆ ನನ್ನ ಸಂಬಂಧದವರೊಬ್ಬರು ತೀರಿಕೊಂಡಿರುವ ಸಾವಿನ ಸುದ್ಧಿ ಒಯ್ಯುತ್ತಿರುವೆ ಎಂದಾಗ ಯಜಮಾನ ತಾನೆ ಬಂದು ಒಂದು ಕುದುರೆ ಬಿಚ್ಚಿಕೊಟ್ಟ.' (ಪುಟ೧೪೭) ದಳವಾಯಿಗೆ ಸಂಬಂದವೇ ಇಲ್ಲದ ಅಲೆಮಾರಿ ಪೂಜಾರಿ ಗಾಯಗೊಂಡ ಸಿಪಾಯಿಗೆ ಸ್ನಾನ ಮಾಡಿಸಿ ಗಾಯದ ಕೀವು ತೆಗೆದು ಗಾಯಕ್ಕೆ ಔಷಧಿ ಕಟ್ಟಿ ಉಪಚರಿಸುವುದು. ವಯಸ್ಕ ಸಂತರು ತಾವು ಬೇಯಿಸಿದರಲ್ಲಿ ಆತನಿಗೂ ನೀಡುವುದು. ಕಾವೇರಿಪುರದ ಜನ ದಾಸಪ್ಪನನಾದ ದಳವಾಯಿಗೆ ಅನ್ನ, ಆಹಾರ, ಆಶ್ರಯ ನೀಡುವುದು. ಹೀಗೆ ರಾಜಕೀಯ ಸ್ಥಿತ್ಯಂತರಗಳಿಂದ ನಿರ್ಲಿಪ್ತವಾದ ಜನಸಾಮಾನ್ಯರ ಮಾನವೀಯ ಬದುಕಿನ ಚಿತ್ರಣವಿದೆ.

ಕಂಪನಿ ಸರ್ಕಾರದ ವಸಹಾತುಶಾಹಿ ರಾಜಕಾರಣದ ಪ್ರಸ್ತಾಪವನ್ನು ಕಾದಂಬರಿ ಪರೋಕ್ಷವಾಗಿ ಮಾಡುತ್ತದೆ, ಅವರ ಎದುರು ಟಿಪ್ಪುವಿನ ಹೋರಾಟ ಅದರಲ್ಲಿ ಅವನ ಸೋಲು ತನ್ನವರಿಂದಲೇ ಅವನು ಅನುಭವಿಸಿದ ವಿಶ್ವಾಸದ್ರೋಹ, ಹತಾಶೆ, ದುರಂತಗಳನ್ನು ದಳವಾಯಿಯ ಪ್ರಜ್ಞೆಯಲ್ಲಿ ದಾಖಲಿಸುವ ಪ್ರಯತ್ನವನ್ನು ಮಾಡುತ್ತದೆ.

ಟಿಪ್ಪುವನ್ನು ಧರ್ಮಾಂದ, ಹಿಂದುವಿರೋಧಿ ಎಂದು ಕರೆಯುವವರು ಇದ್ದಾರೆ. ಹಾಗೆಯೇ ಅವನ ಸಾಧನೆಯನ್ನು ಗಮನಿಸಿದವರು ಅವನೊಬ್ಬ ದೇಶಪ್ರೇಮಿ, ಹಿಂದೂಗಳಸ್ನೇಹಿತ, ದಕ್ಷ ಆಡಳಿತಗಾರನಾಗಿದ್ದನೆಂದೂ ಎಂದು ಕರೆಯುವ ಮತ್ತೊಂದು ವರ್ಗವೂ ಇದೆ. ಹನೂರು ಈ ಎರಡು ವರ್ಗಗಳಲ್ಲಿ ಯಾವುದೊಂದು ವರ್ಗಕ್ಕೂ ಸೇರದೆ ನಿರ್ಲಿಪ್ತವಾಗಿ ಸ್ವತಂತ್ರವಾಗಿ ಕೃತಿ ರಚಿಸಿದ್ದಾರೆ. ಟಿಪ್ಪು ಇತಿಹಾಸವನ್ನು ಹೇಳುವುದರೊಂದಿಗೆ ಅವನಲ್ಲೂ ಇರಬಹುದಾದ ಆತ್ಮವಿಮರ್ಶೆಯಲ್ಲಿ ಅತನ ತಪ್ಪಿತಸ್ಥ ಮನೋಭಾವನ್ನು ಮನಮುಟ್ಟುವಂತೆ ಕಾದಂಬರಿಯಲ್ಲಿ ವಿವರಿಸಿದ್ದಾರೆ.

ಟಿಪ್ಪುವಿನ ಮನಸ್ಥಿತಿಗೆ ಅನುಗುಣವಾಗಿ ಜನಪದ ಕಥೆಯೊಂದು ಕಾದಂಬರಿಯಲ್ಲಿ ರೂಪುಗೊಂಡಿದೆ 'ಪರಮೇಶ್ವರನಿದ್ದು ಪಾರ್ವತಿ ನಿನಗೆ ಗೊತ್ತಿಲ್ಲ ಭೂಲೋಕದಲ್ಲಿ ಅರಸನಾಗಿ ಹುಟ್ಟುವುದು ಅಂದರೆ ಏನೆಂದು ತಿಳಿದಿರುವೆ? ಅರಮನೆ ಕಷ್ಟ ಒಂದೇ ಎರಡೇ ಮಂತ್ರಿಮಾನ್ಯರು, ದಂಡನಾಯಕರು, ಕಳ್ಳಕಾಕರು, ಲಂಚಕೋರರು, ಕಟ್ಟಿಕೊಂಡ ಅಂಕೆ ಶಂಕೆಯಿಲ್ಲದ ರಾಣಿಯರು, ಹುಟ್ಟಿದ ಮೇಲೆ ದಾಯಾದಿಗಳಂತೆ ಬೆಳೆಯುವ ಮಕ್ಕಳು, ಇದೆಲ್ಲವೂ ಅರಮನೆ ಒಳಗಿನ ರಣರಂಗ, ಇನ್ನು ಅರಸರ ಬಯಲ ರಣರಂಗದಲ್ಲಿ ಅವನ ಸಮಾಧಿಯ ನೆಲೆ ಎಲ್ಲಿರುತ್ತದೋ ಅವನಿಗೆ ಗೊತ್ತಿಲ್ಲ. ಗುಡಿಸಿಲ ಬಡವನಿಗೆ ಅಂತಹ ಒಡಬಾಳು ಎಲ್ಲಿಯದು. ಮಣ್ಣಿನೊಂದಿಗೆ ದುಡಿಮೆ, ಗುಡಿಸಲ ನೆರಳ ಅನ್ನ, ಕಲ್ಲು ಹಾಸಿಗೆ ಮೇಲೂ ನಿದ್ದೆ.' (ಪು. ೬೭) ಎಂದು ಹೇಳುವಲ್ಲಿ ರಾಜರ ದುರಂತ ಬದುಕಿನ ಬವಣೆಯನ್ನು ತಿಳಿಸುತ್ತದೆ. ಇದಕ್ಕೆ ಉತ್ತಮ ಉದಾಹರಣೆ ಟಿಪ್ಪುವಿನ ಸ್ಥಿತಿಯಾಗಿದೆ. ಇದೊಂದು ದಂತಕಥೆಯಾದರೂ ಇದರಲ್ಲಿರುವ ವಿಷಯಗಳು ವಾಸ್ತವಿಕತೆಗೆ ಹತ್ತಿರವಾಗಿವೆ. ಶಿವ ಪಾರ್ವತಿಯರ ಹೆಸರಿನಲ್ಲಿ ಜಾನಪದರು ಸೃಷ್ಟಿಸಿಕೊಂಡು ಹೇಳುವ ಈ ಕಥೆ ಜನಪದರ ಅನುಭವದ ಆಳವನ್ನು ಸೂಕ್ಷತೆಯನ್ನೂ ಸಾಬೀತು ಪಡಿಸುತ್ತದೆ.

ಕಾದಂಬರಿಯಲ್ಲಿ ಟಿಪ್ಪುವಿನ ಸಾವಿನ ವಿಷಯ ವಿಶೇಷವಾಗಿ ಮೂಡಿಬಂದಿದೆ. ಇದು ಟಿಪ್ಪುವಿನ ಎದೆಯ ಮೇಲೆ ಇದ್ದ ವಜ್ರದ ಹರಳು ಹೊಳೆಯುವಂತೆಯೇ ಕಾದಂಬರಿಯ ಕೇಂದ್ರ ವಸ್ತುವಾಗಿದೆ. ಇದು ಐತಿಹಾಸಿಕ ಸಂಗತಿಯೂ ಕೂಡ ಆಗಿದೆ. ಟಿಪ್ಪುವನ್ನು ಕೊಂದ ವ್ಯಕ್ತಿಯೇ ಟಿಪ್ಪುವಿನ ಸಾವು ಹೇಗಾಯಿತು ಎಂದು ನಿರೂಪಿಸಿರುವುದು ವಿಶಿಷ್ಟವಾಗಿದೆ. ಕುಂಪಣಿ ಸೈನಿಕ ಆ ಸನ್ನಿವೇಶವನ್ನು ಹೀಗೆ ಹೇಳುತ್ತಾನೆ. 'ಟಿಪ್ಪು ಸುಸ್ತಾಗಿ ಬಳಲಿ ಇದೇ ಉತ್ತರ ಭಾಗದ ಕೋಟೆಯ

ಮರದ ಕೆಳಗೆ ಒರಗಿದ್ದ. ನನಗೆ ಅವನು ಟಿಪ್ಪು ಎಂದು ಗೊತ್ತಿರಲಿಲ್ಲ. ಆದರೆ ಅವನು ತೊಟ್ಟಿದ್ದ ವಸ್ತ್ರದ ನಡುಮಧ್ಯೆ ಚಿನ್ನದ ನಡುಪಟ್ಟಿ ಹೊಳೆಯುತ್ತಿತ್ತು. ಅವನ ಕತ್ತಿಯ ಹಿಡಿಕೆಯೂ ಹೊಳೆಯುತ್ತಿತ್ತು. ಅವನು ಸತ್ತೆ ಹೋಗಿರಬೇಕೆಂದು ಅವನ ಬಳಿ ಮೆಲ್ಲಮೆಲ್ಲನೆ ಸರಿದೆ. ಮೊದಲು ಚಿನ್ನದ ನಡುಪಟ್ಟಿ ಕಿತ್ತುಕೊಳ್ಳುವ ಆಸೆಯಾಯಿತು ಹತ್ತಿರ ಹೋದಂತೆ ಆತ ಎಚ್ಚರವಾಗಿಬಿಟ್ಟ, ಎದ್ದು ಹುಲಿಯಂತೆ ನೋಡಿದ. ಅವನು ಬಳಲಿ ಬೆಂಡಾಗಿ ಕೂತಿದ್ದಾನೆ ಎಂದುಕೊಂಡರೆ ತನ್ನತ್ತ ಕತ್ತಿ ಬೀಸಿಯೇ ಬಿಟ್ಟ, ನನ್ನ ಹೊಟ್ಟೆ ನಡು ಕತ್ತರಿಸಬೇಕಾಗಿದದ್ದು ತೊಡೆಗೆ ಏಟುಬಿತ್ತು. ತೊಡೆಗೆ ಬಲವಾದ ಏಟು ಬಿದ್ದು ರಕ್ತ ಸುರಿಯುವಲ್ಲಿ ನಾನು ಬಂದೂಕು ಹಾರಿಸಿ ಬಿಟ್ಟೆ. ಟಿಪ್ಪು ಸನಿಹದಲ್ಲೆ ನಾನು ಇದ್ದುದ್ದರಿಂದ ಗುಂಡು ಎದೆಗೆ ನಾಟಿ ಬಿಟ್ಟಿತ್ತು. ರಕ್ತಕಾರಿ ಒರಗಿದ.' (ಪು.೧೮೩) ಇದು ಟಿಪ್ಪುವಿನ ದಾರುಣ ಸಾವಿನ ಸ್ಥಿತಿಯನ್ನು ಹೇಳುತ್ತದೆ. ಈ ರೀತಿಯ ಒಂದು ಐತಿಹಾಸಿಕ ಘಟನೆ ಕಾದಂಬರಿಯಲ್ಲಿ ಅಡಗಿರುವುದು ಕಾದಂಬರಿಯ ಶ್ರೇಷ್ಠತೆಯನ್ನು ಸೂಚಿಸುತ್ತದೆ.

ಈ ಕೃತಿಯನ್ನು ಕುರಿತು ವಿಮರ್ಶಿಸುತ್ತಾ ಎಚ್, ಎಸ್. ಶಿವಪ್ರಕಾಶ್‌ರವರು ಹೀಗೆ ಹೇಳುತ್ತಾರೆ. ""ವಿದ್ವಾಂಸರ ಬರಹಗಾರರ ಇತಿಹಾಸಕಾರರ ಮತ್ತು ಬುದ್ಧಿಜೀವಿಗಳ ನಡುವೆ ಬಹುಚರ್ಚಿತವಾಗಿರುವ ಹೈದರ್- ಟಿಪ್ಪು ಯುಗದ ಕಥಾಹಂದರವನ್ನು ಹೊಂದಿರುವ ಈ ಕೃತಿ ಆ ಚರ್ಚೆಗಳ ವಿಷಯಗಳಿಂದ ದೂರ ಸರಿದು ಅವುಗಳಲ್ಲಿ ಯಾವುವು ಎತ್ತದ ಮಾನವೀಯ ಪ್ರಶ್ನೆಗಳನ್ನು ಹುಟ್ಟು ಹಾಕುತ್ತದೆ. ಹೈದರ್-ಟಿಪ್ಪು ವ್ಯಕ್ತಿತ್ವಗಳ ಬಗ್ಗೆ ಇಲ್ಲಿಯವರೆಗೆ ಬಂದಿರುವ ಎಲ್ಲ ಸೃಜನಶೀಲ ಮತ್ತು ಸೃಜನೇತರ ಬರಹಗಳಿಗಿಂತಲೂ ಭಿನ್ನವಾದ ದಾರಿಯನ್ನು ಈ ಕೃತಿ ತುಳಿದಿದೆ."" ಎಂದು ಹೇಳಿದ್ದಾರೆ. ಇದು ಈ ಕಾದಂಬರಿಯ ಶ್ರೇಷ್ಠತೆಯನ್ನು ತಿಳಿಸುತ್ತದೆ.

ಟಿಪ್ಪುಸುಲ್ತಾನನ ದಳವಾಯಿ ಒಬ್ಬನ ಆತ್ಮಚರಿತ್ರೆಯು ಅರಸರ ಕುಟಿಲನೀತಿಯನ್ನು ಬಿಚ್ಚಿಡುವುದರೊಂದಿಗೆ ದಮನಿತ ಸ್ತ್ರೀಯರ ನೋವಿನ ದನಿಯಾಗಿಯೂ ಮೂಡಿಬಂದಿದೆ. ಹನೂರರ ಕಾದಂಬರಿಯಲ್ಲಿ ಪುರುಷರ ಅಟ್ಟಹಾಸಕ್ಕೆ ಬಲಿಯಾದ ಮಹಿಳೆಯರ ಕೊರಳ ದನಿಯಾಗಿ ಓದುಗರ ಮನದಲ್ಲಿ ಪ್ರತಿಧ್ವನಿಸುತ್ತದೆ.

ಕಾದಂಬರಿಯಲ್ಲಿ ಮತ್ತೊಂದು ಗಮನಿಸಬೇಕಾದ ಅಂಶವೆಂದರೆ ಸತಿಸಹಗಮನ ಪದ್ದತಿ. ಇಲ್ಲಿ ಸ್ತ್ರೀಯರು ಸ್ವತಃ ತಾವೇ ಬೆಂಕಿಪಾಲು ಅಥವಾ ನೀರುಪಾಲು ಆಗುವುದು ಮತ್ತೊಂದೆಡೆ ಬಲವಂತದಿಂದ ಅವರನ್ನು ಚಿತೆಗೆ ದೂಡುವುದು ಎರಡು ಅನಿಷ್ಟ ಪದ್ಧತಿಗಳನ್ನು ಈ ಕಾದಂಬರಿಯಲ್ಲಿ ಚಿತ್ರಿಸಲಾಗಿದೆ. ಸತ್ತ ರಾಜನ ರಾಣಿಯರು ಶತ್ರುಗಳ ಕಡೆಯಿಂದ ಒದಗಬಹುದಾದ ಆಕ್ರಮಣ ಹಾಗೂ ಅತ್ಯಾಚಾರಗಳನ್ನು ನೆನೆದು ಸತಿಪದ್ದತಿಗೆ ಶರಣಾಗುತ್ತಿದ್ದರು. ಬೆಂಕಿ ಹಚ್ಚಲು ಬೇಕಾದ ಎಣ್ಣೆ ಸೌದೆಯ ಜಮಾವಣೆ ತಡವಾದರೆ ಅರಮನೆ ಸುತ್ತಿನ ಬಾವಿಗೆ ಹಾರುತ್ತಿದ್ದರು. ಗಂಡ

ಸತ್ತ ಹೆಣ್ಣುಮಕ್ಕಳನ್ನು ಸತಿಪದ್ಧತಿಗೆ ಬಲವಂತವಾಗಿಯೂ ದೂಡುತ್ತಿದ್ದರು(ಪು.೧೩೪). ಇದು ಸ್ತ್ರೀಯರ ಮೇಲಿನ ದೌರ್ಜನ್ಯ ಎಷ್ಟು ಕ್ರೂರವಾಗಿತ್ತೆಂಬುದಕ್ಕೆ ನಿದರ್ಶವಾಗಿದೆ.

ಇಡೀ ಕಾದಂಬರಿಯಲ್ಲಿ ಮಹಿಳೆಯರು ಎಷ್ಟು ಸಬಲರು ಮತ್ತು ದುರ್ಬಲರು ಎಂಬ ಎರಡೂ ಚಿತ್ರಣವನ್ನು ಕಟ್ಟಿಕೊಡುತ್ತದೆ. "ಇಲ್ಲಿನ ಹೆಣ್ಣು ಮಕ್ಕಳು ಪುರಾಣ ದೈವತ್ವಕ್ಕೇರುವ ಪುರಾಣ ಕೀರ್ತಿತ ಪತಿವ್ರತೆಯರೂ ಅಲ್ಲ. ಅಥವ ದನಿ ಕಳೆದುಕೊಂಡ ಅಮಾಯಕ ಬಲಿಗಳೂ ಅಲ್ಲ. ಕಠೋರ ಸಂದರ್ಭಗಳಲ್ಲೂ ತಮ್ಮ ಸ್ವಾತಂತ್ರ್ಯವನ್ನು ಸಾಬೀತು ಪಡಿಸುವ ಸಬಲೆಯರು." ಓಬವ್ವನಂತಹ, ದಾಸಯ್ಯನ ಮಗಳಂತಹ, ಸೈನಿಕನ ಮಡದಿಯಂತಹ ಮಹಿಳೆಯರು ಎಷ್ಟೇ ಕಷ್ಟ ಬಂದರೂ ಧೈರ್ಯದಿಂದ ಎದುರಿಸುವ ಮನೋಪ್ರವೃತ್ತಿಯನ್ನು ಹೊಂದಿದ್ದರೆ, ದಳವಾಯಿ ಹೆಂಡತಿ, ರಾಜ್ಯದ ರಾಣಿಯರು, ಪುರುಷರನ್ನೆ ಅವಲಂಬಿಸಿ ಬದುಕುತ್ತಿದ್ದುದರಿಂದ ಕೊನೆಯಲ್ಲಿ ದುರಂತದ ಸಾವಿಗೆ ಈಡಾಗುತ್ತಿದ್ದರು. ಇದಕ್ಕೆ ಪ್ರಮುಖ ಕಾರಣ ಪುರುಷರು ಮಹಿಳೆಯರ ಮೇಲೆ ನಡೆಸುತ್ತಿದ್ದ ಅತ್ಯಾಚಾರ ದೌರ್ಜನ್ಯಗಳೇ ಕಾರಣವಾಗಿದ್ದವು. ಕಾದಂಬರಿಯಲ್ಲಿ ಜಾನಪದ ಕಾವ್ಯಮಯ ಕಥಾನಕಗಳು ರಚನೆಯಾಗಿರುವುದನ್ನು ಕಾಣುತ್ತೇವೆ.

ಹನೂರರು ಮೂಲದಲ್ಲಿ ಜಾನಪದ ವಿದ್ವಾಂಸರು. ಆದ್ದರಿಂದ ಕಾದಂಬರಿಯಲ್ಲಿ ಜನಪದ ಅಂಶಗಳು ಸಮೃದ್ಧಿಯಿಂದ ಕೂಡಿವೆ. ಇಲ್ಲಿ ಗುಡ್ಡರು, ನೀಲಗಾರರು, ಹಗಲುವೇಷದವರು, ಬಯಲಾಟದವರು, ಸೂತ್ರದ ಗೊಂಬೆಯವರು, ದಾಸಯ್ಯಗಳು, ದೊಂಬರು, ಅಲೆಮಾರಿಗಳು ಹೀಗೆ ಅನೇಕ ರೀತಿಯ ಕಾಯಕದ ಗುಂಪುಗಳನ್ನು ಗುರುತಿಸಲಾಗಿದೆ. ಒಬ್ಬೊಬ್ಬರ ಆಚರಣೆಗಳು ಒಂದೊಂದು ರೀತಿ ನೀತಿಗಳು ವೈಶಿಷ್ಟ್ಯಪೂರ್ಣವಾಗಿದೆ. ಉದಾಹರಣೆಗೆ ಸಂತನೊಬ್ಬನ ಜೀವೈಕ್ಯ ಸ್ಥಳದಲ್ಲಿ ಜಾತ್ರೆಯನ್ನು ನಡೆಸುವುದು. ಹಾಗೆಯೇ ಅಲೆಮಾರಿಗಳ ಗುಂಪಿನಲ್ಲಿ ಜೀವನ ವೈಖರಿಯನ್ನು ಅವರಿಗೆ ಸಮಾಜ ಹೇರುವ ನಿರ್ಬಂಧಗಳನ್ನು ಸ್ಪಷ್ಟವಾಗಿ ಚಿತ್ರಿಸಿದ್ದಾರೆ. ಅವರು ಬೇಟೆಯಾಡಿ ತಂದ ಪ್ರಾಣಿಗಳನ್ನು ಆಹಾರವಾಗಿ ಮಾಡಿಕೊಂಡು ಕುಡಿದು ತಿಂದು ತಮ್ಮ ದೈನಂದಿನ ಆಯಾಸವನ್ನು ಕಳೆಯುವ ಜೀವನ ವೈಖರಿ ವೈಶಿಷ್ಟ್ಯಪೂರ್ಣವಾಗಿದೆ. ಇಲ್ಲಿ ಕಾವ್ಯಕಥನವೂ ಇದೆ.

ಕಂಚುನಂಗೆ ಹೊಳೆವ ಹೆಣ್ಣೆ

ಹೊರಳಿ ನೋಡೆ ಕಣ್ಣು ತೆರೆದು

ಕುತುನಿ ಚೆಂಡು ತೆರೆದು ತೋರೆ

ರತ್ನದಂಥ ಪುರುಷ ನಾನು..... (ಪು.೧೯೦

ಇದು ಅಲೆಮಾರಿ ಬದುಕಿನ ಚಿತ್ರಣವನ್ನು ಜಾನಪದೀಯ ಹಿನ್ನೆಲೆಯಲ್ಲಿ ಕಟ್ಟಿಕೊಡುತ್ತದೆ. ಇಲ್ಲಿ ಮಹಾಭಾರತ ನಾಟಕಪ್ರಸಂಗ, ವೀರಗಾಸೆ, ದಂತಕಥೆಗಳು. ಪುರಾಣಗಳು ಮುಂತಾದ ಅಂಶಗಳು ಕಾದಂಬರಿಯಲ್ಲಿ ಬಳಕೆಯಾಗಿದೆ. ಹಾಗೆಯೇ ವೀರಗಾಸೆಯವನು ಶಿವನ ಕಥೆ ಹೇಳಿಕೊಂಡು ಲಯಬದ್ಧವಾಗಿ ಕುಣಿಯುತ್ತಿದ್ದ ದೃಶ್ಯವಿದೆ.

ಓಂ ನಮಃ ಶಿವಾಯ ಪಾರ್ವತಿ ಪತಿಯೇ ನಮಃ

ಶಿವಾ ಶಿವಾ ತೊಡೆಯಲ್ಲಿ ಪಾರ್ವತಿದೇವಿ

ಜಡೆಯಲ್ಲಿ ಗಂಗಾಮಾತೆ

ಸಸಡಗರದಲ್ಲಿರುವ ನಂದಿ ವಾಹನನೆ

ಮುಪ್ಪಾದವರಿಗೆ ಹಿಡಿಯನ್ನು ಕರುಣಿಸು

ಹಣ್ಣಾದವರಿಗೆ ಹಾಲು ಅನ್ನವ ಕಾಣಿಸು

ಮಕ್ಕಳಿಲ್ಲದವರಿಗೆ ಶಿಶುಗಳ ಕರುಣಿಸು

ಒಕ್ಕಲು ಮಕ್ಕಳಿಗೆ ಮಳೆಯ ಕರುಣಿಸು

ಲೋಕಕ್ಕೆ ಘನಸಂಪತ್ತು ಕೊಡುವ ಪರಮೇಶ್ವರನೆ...

ಅಹಹಾ ದೇವ ಅಹಹಾ ರುದ್ರ,

ಎಂದು ಕಾಲಿಗೆ ಗೆಜ್ಜೆಕಟ್ಟಿ, ಕೆಂಪುವಸ್ತ್ರವನ್ನು ಧರಿಸಿ, ಕೈಯಲ್ಲಿ ಕತ್ತಿ ಹಿಡಿದು ಕುಣಿಯುವ ದೃಶ್ಯವನ್ನು ಕಲ್ಪಿಸಿಕೊಳ್ಳಲಾಗಿದೆ. ಹೀಗೆ ಇನ್ನೂ ಅನೇಕ ಸನ್ನಿವೇಶಗಳಲ್ಲಿ ಜಾನಪದೀಯ ಕಾವ್ಯಮಯ ಕಥನಗಳ ವರ್ಣನೆ ಇದೆ.

ಜೊತೆಗೆ ಕಾದಂಬರಿಯ ಪ್ರಧಾನ ಅಂಶವೆಂದರೆ ಆತ್ಮಾವಲೋಕನ. ಇದು ಕಾದಂಬರಿಯ ಆರಂಭದಿಂದ ಅಂತ್ಯದವರೆಗೂ ಕಂಡುಬರುತ್ತದೆ. ತನ್ನ ತಪ್ಪುಗಳ ಪ್ರಾಯಶ್ಚಿತ್ತಕ್ಕೆ ಆತ್ಮಾವಲೋಕನ ಮಾಡಿಕೊಳ್ಳಲು ದಳವಾಯಿ ಕಥೆಯನ್ನು ಬರೆದಿದ್ದು, ಇದು ಎಷ್ಟೋ ಐತಿಹಾಸಿಕ ಅಂಶಗಳನ್ನು ತಿಳಿಯಲು ಕಾರಣವಾಯಿತು. ಟಿಪ್ಪುವಿನ ಆತ್ಮಾವಲೋಕನವನ್ನು ಕೂಡ ಇಲ್ಲಿ ಕಾಣುತ್ತೇವೆ. ಕಾದಂಬರಿಯಲ್ಲಿ ದಳವಾಯಿ ಆತ್ಮವಿಮರ್ಶೆ ಮುಖ್ಯವಾಗುತ್ತದೆ. ಆತ್ಮವಿಮರ್ಶೆ ಮಾಡಿಕೊಳ್ಳಲು ಪ್ರೇರಣೆ ಈ ಸಾಲುಗಳಿರಬೇಕು 'ಅಂತರಂಗ ಆತ್ಮ ಎಂಬುದಿದೆಯಲ್ಲ ಅದು ನಮ್ಮ ಕಣ್ಣಿಗೆ ಸೂರ್ಯನ ಬೆಳಕಿನಂತೆ ಹೊಳೆಯುತ್ತಿರುವ ವಸ್ತುವಿನಂತೆ ಕಾಣುವಂತಾಗಬೇಕು. ಮನುಷ್ಯನು ಸಂಸಾರ ಜಂಜಾಟದಲ್ಲಿ ತೊಡಗುವುದು ವಿಹಿತ. ಎಲ್ಲ ಉಪಭೋಗಗಳಿಗೂ ಸ್ಥಾನವುಂಟು. ಅದಿಲ್ಲ ಎಂದಿದ್ದರೆ ದೇವರು ಮನುಷ್ಯನಿಗೆ ದೇಹವನ್ನು ದಯಪಾಲಿಸುತ್ತಿರಲಿಲ್ಲ. ಭೋಗವೇ ಜೀವನವಲ್ಲ, (ಪು.೨೦೬)

ಎಂಬ ಮಾತುಗಳು ದಾಸಯ್ಯ (ದಳವಾಯಿ) ಮನಃಪರಿವರ್ತನೆಗೆ ಮೂಲ ಪ್ರೇರಣೆ. ನನ್ನ ಎಲ್ಲ ಆಟಾಟೋಪ, ಅಡಾವುಡಿ ಹುಸಿ ಪರಾಕ್ರಮ ನೋಡುತ್ತಲೆ, ನಗುತ್ತಲೇ ಈ ಪ್ರಕೃತಿ ನನ್ನನ್ನು ಇನ್ನೂ ಸಲಹುತ್ತಲೆ ಇದೆಯಲ್ಲ ಅದಕ್ಕೆ ನನ್ನ ಅನಂತ ನಮಸ್ಕಾರಗಳು (ಪು.೨೧೫) ಎಂದು ದಳವಾಯಿ ಹೇಳುವಲ್ಲಿ ಕಾದಂಬರಿ ಅಂತ್ಯದಲ್ಲಿ ಕೂಡ ಪಶ್ಚಾತಾಪದಿಂದಲೇ ಪ್ರಕೃತಿಯ ಸಹನೆಯನ್ನು ಸಲಹುವ ಗುಣವನ್ನು ಸ್ಮರಿಸುತ್ತಾ ಪ್ರಕೃತಿಗೆ ನಮಸ್ಕರಿಸುವಲ್ಲಿ ಕಾದಂಬರಿ ಅಂತ್ಯವಾಗುತ್ತದೆ.

ಎಲ್ಲಾ ಸಂಪತ್ತನ್ನು ದೋಚುತ್ತಿದ್ದ ದಳವಾಯಿ ಕೊನೆಗೆ ತನ್ನಲ್ಲಿದ್ದ ಕುದುರೆಯನ್ನು ತನಗೆ ಹಲವಾರು ಬಾರಿ ಸಲಹಿದ ಮನೆಯವರಿಗೆ ನೀಡುತ್ತಾನೆ. ಅಧಿಕಾರ ಲಾಲಸೆಯಿಂದ ಅಹಂಕಾರದಿಂದ ವಿಜೃಂಭಿಸುವ ರಾಜಮಹಾರಾಜರ ಅಡಿಯಾಳಾಗಿ ಅಮಾನವೀಯ ಕೃತ್ಯಗಳನ್ನು ಗೈಯುತ್ತಾ ಕೊನೆಘಳಿಗೆಯಲ್ಲಿ ತನ್ನ ದುಷ್ಕೃತ್ಯಗಳಿಗಾಗಿ ಹಳಹಳಿಸುವ ಸೈನಿಕನೊಬ್ಬನ ಆತ್ಮಕಥೆ ಇಲ್ಲದೆ.

ಹೈದರಾಲಿಯು ಟಿಪ್ಪುವಿಗೆ ಕೊನೆ ಘಳಿಗೆಯಲ್ಲಿ ಬರೆದ ಪತ್ರದ ಸಾರಾಂಶ ಈ ದೇಶದ ರಾಜಕೀಯ ವ್ಯವಸ್ಥೆ ಅರಾಜಕತೆಯನ್ನು ಹೇಳುತ್ತದೆ. 'ಕುಂಪಣಿಯವರ ಸ್ನೇಹ ಸಂಬಂಧವೇ ನನ್ನ ಬಲ' ಎಂದು ತಿಳಿದಿದ್ದೆ, ನಿಜಶತ್ರುಗಳ ವಿರುದ್ಧ ಪ್ರಾಮಾಣಿಕರ ವಿರುದ್ಧ ಹೊಡೆದಾಟ ಸುಲಭ. ಆದರೆ ಕುತಂತ್ರ ಬೆರೆತ ಅಪ್ರಾಮಾಣಿಕರ ಎದುರು ಹೊಡೆದಾಟ ಕಡುಕಷ್ಟ. ಕುಂಪಣಿಯವರೊಡನೆ ಸಂಧಾನ ಬೆಳಸುವುದೇ ವ್ಯರ್ಥ'. ಈ ವಿದೇಶಿಯರ ಎದುರು ನೀನು ಗುಂಪು ಕಟ್ಟಬಲ್ಲೆಯಾ? ಹೈದಾರಬಾದಿನ ನಿಜಾಮ, ಗಾಯಕವಾಡದ ಸಿಂಧ್ಯ, ನಾಗಾಪುರದ ಬೋಸ್ಲೆ ಇವರೆಲ್ಲರ ಸ್ನೇಹವನ್ನು ಬಯಸಿದರೆ ಇವರು ನಮ್ಮ ಬುಡವನ್ನು ಅಲುಗಾಡಿಸುವವರಾದರು' ಎಂಬ ಮಾತು ಬ್ರಿಟಿಷರ ಕುತಂತ್ರ ರಾಜಕಾರಣ ಹಾಗೂ ಈ ನೆಲದ ರಾಜರಲ್ಲಿನ ಒಗ್ಗಟ್ಟಿನ ಕೊರತೆಗೆ ಹಿಡಿದ ಕನ್ನಡಿಯಾಗಿದೆ.

ಯುದ್ಧದ ಕಟೋರ ನೀತಿಯಿಂದ ಸಾಮಾನ್ಯ ಜನತೆ ಅನುಭವಿಸುವ ಯಾತನೆಯ ಬದುಕು ಕಾದಂಬರಿಯಲ್ಲಿದೆ. ರಾತ್ರಿ ಕಲ್ಲು ಕರಗಿದಂತೆ. ರಕ್ತ ಸುರಿಯದನ್ನ ಮಂದಿ ಸಾಯೋದನ್ನು ಕಂಡು ನಾ ಗೆದ್ದೆ ನಾ ಗೆದ್ದೆ ಅನ್ನುವವರು ಕರಗದುಂಟ ದಳವಾಯಿ'. ಎಂಬ ಮಾತು ಮನ ಮಿಡಿಯುತ್ತದೆ. ಮನುಷ್ಯತ್ವವನ್ನು ಕಳೆದುಕೊಂಡ ಯುದ್ಧನೀತಿಯನ್ನು ಉದ್ದೇಶಿಸಿ ಸೈನಿಕನ ಹೆಂಡತಿಯಾಡುವ ಮಾತು ಸರ್ವಕಾಲೀಕವಾದುದು. ಸಾಮ್ರಾಜ್ಯ ಸಾಧನೆಗಿಂತ ಮನುಷ್ಯ ಸಂಬಂಧವೇ ದೊಡ್ಡದು. ಆದರೆ ಹಿಂಸೆಯಲ್ಲೆ ಇರುವ ನಮಗೆ ಮನುಷ್ಯ ಸಂಬಂಧದಲ್ಲಿ ಆನಂದ ಕಾಣುವುದಿಲ್ಲ.

**ಪಾತ್ರಗಳ ವಿಮರ್ಶಾತ್ಮಕ ವಿಶ್ಲೇಷಣೆ :**

ಈ ಕಾದಂಬರಿಯಲ್ಲಿ ಬರುವ ಯಾವುದೇ ಪಾತ್ರಗಳಿಗೂ ಹೆಸರನ್ನು ನೀಡಿಲ್ಲ. ಇದು ಈ ಕಾದಂಬರಿಯ ವೈಶಿಷ್ಟ್ಯವಾಗಿದೆ. ಈ ಕಾದಂಬರಿಯಲ್ಲಿ ಪಾತ್ರಗಳ ಹೆಸರುಗಳನ್ನು ಉಲ್ಲೇಖಿಸಿರುವಂತೆಯೇ ಪಾತ್ರಗಳನ್ನು ವಿಮರ್ಶಾತ್ಮಕವಾಗಿ ಚರ್ಚಿಸುವುದು ಸಮಂಜಸವಾಗಿದೆ, [೫]"ಈ ಕಾದಂಬರಿ ದಳವಾಯಿಯ ಸಂಸಾರದ ಕಥೆಯೂ ಹೌದು. ಅರಮನೆಯ ಅಂತರಂಗದ ಕಥೆಯೂ ಹೌದು, ದೇಶ ಆಳುವ ದೊಡ್ಡವರ ನಡುವೆ ಸಿಲುಕಿಕೊಂಡ ಸಾಮಾನ್ಯ ಸೈನಿಕರ ನಾಯಿಪಾಡನ್ನು ಕಣ್ಣಿಗೆ ಕಟ್ಟುವಂತೆ ಇಲ್ಲಿ ಚಿತ್ರಿಸಿದ್ದಾರೆ. ಇದು ದಳವಾಯಿ ಅಥವಾ ದೇಸಪ್ಪಯ್ಯನ ಕಥೆಯಷ್ಟೆ ಅಲ್ಲ ಗಮಕದ ಗಣಪಯ್ಯನ ಕಥೆಯೂ ಆಗಿದೆ. ಅಜ್ಞಾತನೊಬ್ಬನ ಆತ್ಮವೃತ್ತಾಂತ ಕಾದಂಬರಿಯ ಪಾತ್ರಗಳು ಇತಿಹಾಸವನ್ನು ಜೀವನದ ಒಳಸುಳಿಗಳನ್ನು ಬದುಕಿ ತೋರಿಸುವಷ್ಟು ಸಶಕ್ತವಾಗಿ ಪಡಿಮೂಡಿವೆ."[೫] ಪ್ರಸ್ತುತ ಕಾದಂಬರಿಯಲ್ಲಿ ಪ್ರಧಾನವಾಗಿ ದಳವಾಯಿ, ಆತನ ತಂದೆ, ಹೈದರ್, ಟಿಪ್ಪು ಪುರುಷ ಪಾತ್ರಗಳಾದರೆ, ದಳವಾಯಿಯ ಹೆಂಡತಿ, ದಳವಾಯಿಯ ರಖಾವು (ದಾಸಯ್ಯನ ಮಗಳು), ನೆರೆಮನೆಯ ಸೈನಿಕನ ಹೆಂಡತಿ ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳಾಗಿವೆ.

**ದಳವಾಯಿ :**

ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ಪ್ರಧಾನ ಪಾತ್ರವೇ ದಳವಾಯಿ. ಈತ ಹೈದರಾಲಿ ಮತ್ತು ಟಿಪ್ಪುಸುಲ್ತಾನನ ಕಾಲದಲ್ಲಿ ದಳವಾಯಿಯಾಗಿದ್ದವನು. ಈ ಕಾದಂಬರಿಯ ಪ್ರಮುಖ ಪಾತ್ರ, ಮತ್ತು ಕಾದಂಬರಿಯ ಜೀವಾಳ ಈ ಪಾತ್ರವೇ ಆಗಿದೆ. ಈ ಪಾತ್ರದ ಸುತ್ತ ಇತರ ಪಾತ್ರಗಳು ಸುತ್ತುತ್ತವೆ ಮತ್ತು ದಳವಾಯಿಯ ಆತ್ಮಕಥನವೇ ಈ ಕಾದಂಬರಿಯ ವಸ್ತುವಿಷಯವಾಗಿದೆ. ಈತನ ಹೆಸರೇನು ಎಂಬುದು ಸತಃ ದಳವಾಯಿಗೆ ತಿಳಿಯದು. ಹುಟ್ಟುತ್ತಲೇ ತಾಯಿನ್ನು ಕಳೆದುಕೊಂಡ ದಳವಾಯಿ ತಂದೆ ಪ್ರೀತಿಯನ್ನೂ ಕಾಣದೆ ಬೆಳೆದವನು. ಈತ ಬಾಲ್ಯದಲ್ಲೆ ಸಣ್ಣ ಪುಟ್ಟ ಕಳ್ಳತನ ಮಾಡಿ ಅದರಲ್ಲಿ ಪಳಗಿದವನು. ತನ್ನ ತಂದೆ ಕಟುಕ ವೃತ್ತಿಯನ್ನು ಕೈಗೊಂಡು ಅದನ್ನು ನೆರವೇರಿಸಲು ಹೋಗುವಾಗ ಅದನ್ನು ನೋಡಿ ಈತನ ಮನಸ್ಸು ತಾನೂ ತಂದೆಯಂತೆ ಅರಮನೆಯಲ್ಲಿ ಒಂದು ಉನ್ನತ ಹುದ್ದೆ ಕೈಗೊಳ್ಳಬೇಕೆಂದು ನಿಶ್ಚಯಿಸುತ್ತಾನೆ. ಹೈದರಾಲಿಯ ಆಡಳಿತದಲ್ಲಿ ಸೈನಿಕನಾಗಿ ನಂತರ ದಳವಾಯಿ ಪಟ್ಟವನ್ನು ಪಡೆದು ಸಾಮಾನ್ಯರ ಬಾಯಿಯಲ್ಲಿ 'ದಳವಾಯಿ' ಎಂದೇ ನಾಮಾಂಕಿತನಾಗುತ್ತಾನೆ. ಬಾಲ್ಯದಲ್ಲಿ ಅಳವಡಿಸಿಕೊಂಡಿದ್ದ ಕಳ್ಳತನ, ಮೋಜು, ಮಸ್ತಿಗಳು, ದಳವಾಯಿ ಪಟ್ಟ ಸಿಕ್ಕಿದಾಗ ದುಷ್ಟ ಕೆಲಸಗಳಿಗೆ ಬಡ್ತಿ ದೊರೆತಂತಾಗುತ್ತದೆ. ಹಳ್ಳಿಗಳಲ್ಲಿ ದರೋಡೆ ಮಾಡುವುದು ಬಲವಂತದಿಂದ ಕಂದಾಯ ವಸೂಲಿ

ಮಾಡುವುದು ಸಿಕ್ಕ ಹೆಣ್ಣುಗಳನ್ನು ರಖಾವು ಮಾಡಿ ಅನುಭವಿಸಿ ಕೊಲ್ಲುವುದು ಈತನ ಪ್ರವೃತ್ತಿಯಾಗುತ್ತದೆ.

ಟಿಪ್ಪುವಿನ ಆಪೇಕ್ಷೆಯಂತೆ ಜೀವಂತ ಹುಲಿಗಳನ್ನು ಸೆರೆಹಿಡಿದು ತಂದವನು. ಅದರಿಂದಾಗಿಯೇ ಇತನನ್ನು ಜನ ಪಂಜರದ ಹೊರಗಿನ ಹುಲಿ ಎಂತಲೇ ಕರೆದರು. ಮತ್ತು ಆ ಹುಲಿಗಳ ಹಾರೈಕೆಯ ಹೊಣೆಯನ್ನೂ ಹೊತ್ತವನು. ದಳವಾಯಿಯ ಪಟ್ಟಕ್ಕಿಂತ ಇನ್ನೂ ಹೆಚ್ಚಿನ ಖಾವಂದರ ಪಟ್ಟಕ್ಕೆ ಹತ್ತಿರವಾದ ಹುದ್ದೆಯನ್ನು ಅಲಂಕರಿಸುವುದಕ್ಕಾಗಿ ಹಗಲಿರುಳು ಕಾಯಕದಲ್ಲಿ ನಿರತನಾದವನು. ಖಾವಂದರ ನಂಬಿಕೆಗೆ ಪಾತ್ರನಾಗಿದ್ದು ಆ ಕಾರಣಕ್ಕಾಗಿ ಟಿಪ್ಪು ಖಾವಂದರು ಇತನನ್ನು ಹರದನಪುರದ ಧರ್ಮ ಗಲಭೆಯನ್ನು ನಿಯಂತ್ರಿಸುವುದಕ್ಕಾಗಿ ಕಳಿಸುತ್ತಾನೆ.

ದಳವಾಯಿ ತನ್ನ ಯೌವನದ ಕಾಲದಲ್ಲಿ ಅನೇಕ ಹೆಣ್ಣುಮಕ್ಕಳನ್ನು ಅಪಹರಿಸುವುದು ಅವರನ್ನು ಅನುಭವಿಸಿದ ನಂತರ ತನ್ನ ಬಂಡವಾಳ ಎಲ್ಲಿ ಜನರಿಗೆ ತಿಳಿಯುವುದೋ ಎಂದು ಅವರನ್ನು ಕೊಂದು ಕಾವೇರಿ ನದಿಯ ಪಾಲು ಮಾಡುತ್ತಿದ್ದ. ರಾತ್ರಿ ವೇಳೆಯಲ್ಲಿ ಕಾವಲು ಕಾಯುವಾಗ ಸಿಕ್ಕಿಬಿದ್ದ ಕಳ್ಳಕಾಕರಿಂದ ವಶಪಡಿಸಿಕೊಂಡ ಕದ್ದ ಮಾಲನ್ನು ಅರಮನೆಗೆ ತಲುಪಿಸದೆ ತನ್ನ ವಪ್ಪಾರೆಯಲ್ಲಿರಿಸಿ ಪೆಟಾರಿಗೆ ಬೀಗ ಜಡಿದು ಅದನ್ನು ತನ್ನ ನಂಬಿಕಸ್ಥ ರಖಾವಿನ ಮನೆಯಲ್ಲಿರಿಸುತ್ತಿದ್ದ. ಇಷ್ಟೆಲ್ಲ ಆಡಾವುಡಿ ಮಾಡಿದ ದಳವಾಯಿ ಹೊಟ್ಟೆಗೆ ಬಿದ್ದ ಕತ್ತಿ ಏಟಿನಿಂದ ಕಾವೇರಿಪುರವೆಂಬ ತಾಣದಲ್ಲಿ ತಂಗುತ್ತಾನೆ ಮತ್ತು ಅಲ್ಲಿಯ ಜನರ ಪ್ರೀತಿವಿಶ್ವಾಸವನ್ನು ಗಿಟ್ಟಿಸುತ್ತಾನೆ. ಜನಗಳ ಬಾಯಲ್ಲಿ ಉತ್ತರ ದಿಕ್ಕಿನಿಂದ ಬಂದ ದಾಸಯ್ಯನಾಗಿ ಉಳಿಯುತ್ತಾನೆ.

ಕಾಲಕಳೆದಂತೆ ಟಿಪ್ಪುಸುಲ್ತಾನ, ತನ್ನ ಹೆಂಡತಿ, ತಾನು ಆಕ್ರಮವಾಗಿ ಕೂಡಿಟ್ಟ ಸಂಪತ್ತು ಎಲ್ಲವೂ ನಾಶವಾದ ಬಳಿಕ ಜೀವನದ ನಶ್ವರತೆಯನ್ನು ಅರಿತವನಾಗಿ ಕಾವೇರಿಪುರದ ಈಶ್ವರ ಗುಡಿಯಲ್ಲಿ ನೆಲೆಸಿ ಈ ಆತ್ಮಚರಿತ್ರೆಯನ್ನು ರಾಗಿಮಸಿಯಲ್ಲಿ ಬರೆದಿಟ್ಟನೆಂದು ತಿಳಿಯುತ್ತದೆ. ಒಟ್ಟಾರೆಯಾಗಿ ಮನುಷ್ಯ ಯೌವನದಲ್ಲಿ ಎಂತಹ ಕೃತ್ಯಗಳನ್ನೆ ಮಾಡಿದ್ದರೂ ಅವನ ಪಶ್ಚಾತಾಪಕ್ಕೊಂದು ಕಾಲವಿದ್ದೇ ಇರುತ್ತದೆ. ಅದನ್ನು ಅರಿತ ದಳವಾಯಿ ತನ್ನ ಎಲ್ಲ ಕೆಲಸಗಳಿಗೂ ಆತ್ಮ ವಿಮರ್ಶೆ ಮಾಡಿಕೊಳ್ಳುವುದರ ಮೂಲಕ ಪ್ರಾಯಶ್ಚಿತವನ್ನು ಕಂಡುಕೊಂಡುಕೊಳ್ಳುತ್ತಾನೆ.



**ದಳವಾಯಿಯ ತಂದೆ :**

ದಳವಾಯಿ ತಂದೆ ಹೈದರಾಲಿಯ ಕಾಲದಲ್ಲಿ ಕಟುಕ ವೃತ್ತಿಯನ್ನು ಕೈಗೊಂಡಿದ್ದವನು. ಹೈದರಾಲಿ ತಪ್ಪಿತಸರಿಗೆ ಕೊಟ್ಟ ಶಿಕ್ಷೆಗಳನ್ನು ನೆರವೇರಿಸುವುದು ಈತನ ಕಾಯಕ. ಕೈ ಕತ್ತರಿಸುವುದು, ರುಂಡ ಕತ್ತರಿಸುವುದು. ಬೆಂಕಿಯ ಜ್ವಾಲೆಯಲ್ಲಿ ಸುಡುವುದು. ಕುದಿಯುತ್ತಿರುವ ಎಣ್ಣೆಯಲ್ಲಿ

ಹಾಕುವುದು. ಮುಂತಾದ ಶಿಕ್ಷೆಗಳನ್ನು ನೀಡುವುದು ಈತನ ಕಾಯಕ. ದಳವಾಯಿಯ ತಂದೆ ಕಟುಕ ವೃತ್ತಿಯನ್ನು ಮಾಡುತ್ತಿದ್ದರೂ ಸ್ವಾಭಾವಿಕವಾಗಿ ಅವನು ಒಬ್ಬ ಮನುಷ್ಯ. ಅವನಿಗೂ ಎಲ್ಲರಂತೆಯೇ ಮೃದು ಮನಸಿತ್ತು. ಆದರೂ ಮಡದಿಯರು ಮತ್ತು ಜನಗಳು ಆತನ ಬಲಾಢ್ಯ ದೇಹವನ್ನು, ಆತನ ಕಟುಕ ವೃತ್ತಿಯನ್ನು ನೋಡಿ ಶಪಿಸುತ್ತಿದ್ದರು. ದಳವಾಯಿಯೂ ಕೂಡ ತಂದೆಗೆ ಮರ್ಯಾದೆ ಕೊಡದೇ ದುಷ್ಟನಂತೆ ನೋಡುತ್ತಾನೆ. ಆದರೆ ಪ್ರಾಮಾಣಿಕವಾಗಿ ತನ್ನ ಕಾಯಕ ಮಾಡಿದವನು ದಳವಾಯಿಯ ತಂದೆ. ತಾನು ಮಾಡುವ ಕಟುಕ ವೃತ್ತಿಯನ್ನು ತನ್ನ ಮಗ ಕಾಣಬಾರದೆಂದು ಗಾಂಜಾಂ ಬಳಿಯಲ್ಲಿ  ಪಾಠಕ್ಕೆ ಸೇರಿಸುತ್ತಾನೆ. ತನ್ನ ಮಗನ ಕಳ್ಳತನದ ಪ್ರವೃತ್ತಿಯನ್ನು ಕಂಡು 'ಇಷ್ಟು ಹೊತ್ತು ಕಟ್ಟಿದ ಕಾಲು ಬಿಟ್ಟ ಕತ್ತೆಯಂತೆ ಸುತ್ತಿ ಬಂದವನೆ ಈಗ ಯಾಕೆ ಬಂದೆ, ಬೀದಿ ಜಗುಲೀಲಿ ಬಿದ್ದು ಸಾಯಿ ಹೋಗು' (ಪು. ೪೬) ಎಂದು ಮಗನನ್ನು ಶಿಕ್ಷಿಸುತ್ತಿದ್ದನು.

'ನೀನು ಅರಮನೆಯ ತಾಪೇದಾರಿ ಮಾಡುವುದು ಬೇಡ. ಮದುವೆಯಾಗು. ಯಾವುದಾದರು ಹಳ್ಳಿಯೊಳಗೆ ಕೈಗೆ ಬಂದ ಕೆಲಸ ಬವಸ ಮಾಡು ಕೂಲಿಯಾದರೂ ಸರಿ. ಅರಮನೆಯ ಸಾವಾಸ ಬೇಡ' (ಪು.೪೬) ಎಂದು ತನ್ನ ಮಗ ಅರಮನೆಗೆ ಸೇರುವುದನ್ನು ವಿರೋಧಿಸಿದ್ದನು. ವಯಸ್ಸಿಗೆ ಬಂದಾಗ ತನ್ನ ಮಗನಿಗೆ ಒಂದು ಒಳ್ಳೆಯ ಹೆಣ್ಣನ್ನು ತಂದು ಮದುವೆ ಮಾಡುತ್ತಾನೆ. ತನ್ನ ಜೀವನದ ಕೊನೆಯ ಘಳಿಗೆಯಲ್ಲಿ ಒಂದು ಮೊಮ್ಮಗುವನ್ನು ಕಾಣಲು ಆಸೆಪಡುತ್ತಾನೆ. ಮನೆಯಲ್ಲಿ ಒಂದು ಕೂಸಾದರೆ. 'ನಾನು ಬಹಾದ್ದೂರರ ಕಾಲಿಗೆ ಬಿದ್ದು ಬೇಡಿ ನೌಕರಿ ಬಿಟ್ಟು ಕೂಸು ಆಡಿಸಿಕೊಂಡು ಇರುತ್ತೇನೆ. ಸೊಸೆ ಅಪ್ಪನ ಮನೆಗೆ ಹೋಗದಿದ್ದರೂ ಚಿಂತೆಯಿಲ್ಲ. ಸೂಲಗಿತ್ತಿಯರನ್ನು ಕರೆ ತಂದು ವರ್ಷಕಾಲ ಜೋಪಾನ ಮಾಡುವೆ.'(ಪು.೫೭) ಎನ್ನುತ್ತಾನೆ. ಇದು ಸೊಸೆಯ ಮೇಲಿರುವ ಅವನ ಪ್ರೀತಿ ಹಾಗೂ ತನ್ನ ವೃತ್ತಿಯನ್ನು ಬಿಡುವ ಅವನ ಮನಸ್ಥಿತಿಯಾಗಿದೆ.

ಎಷ್ಟೋ ದಿನಗಳು ತಾನು ಮಾಡುತ್ತಿರುವ ಈ ಕಟುಕ ವೃತ್ತಿಯ ಪಾಪದ ಕೆಲಸವನ್ನು ನೆನೆದು ದುಃಖಿಸುತ್ತಾನೆ. 'ಕುರಿ, ಕೋಳಿ, ಕೋಣದ ಕತ್ತು ಕತ್ತರಿಸುವವರನ್ನು ನಾನು ಬಲ್ಲೆ, ಆದರೆ ನನ್ನಂಥವರನ್ನು ಈ ಲೋಕದಲ್ಲಿ ಕಾಣಲು ಸಾಧ್ಯವೆ. ನರಮಾನವರ ಕೈಕಾಲು ಕತ್ತರಿಸುವ ಕಾಯಕದಲ್ಲೆ ಬದುಕಿಬಂದೆನಲ್ಲ. ಒಂದು ದಿನವೂ ಪುಣ್ಯಕಾರ್ಯದ ಮಾರ್ಗವನ್ನೆ ಕಾಣದವನು. ಈ ನನ್ನ ಪಾಪ ಕೃತ್ಯಗಳನ್ನು ಯಾವ ದೈವದ ಮುಂದೆ ಹೇಳಿಕೊಳ್ಳಲಿ. ಅಂಥ ದೈವ ನನ್ನ ಪಾಲಿಗೆ ಇದ್ದರೆ ಅದು ನನ್ನ ಕೃತ್ಯಗಳನ್ನು ಕೇಳುವ ಕಿವಿಯೇ ಬೇಡ ಎನ್ನಬಹುದು. ಆ ದೈವದ ನೆಲೆಯ ಫಾಸಲೆಯಲ್ಲಾದರೂ ನಿಲ್ಲುವ ಯೋಗ್ಯತೆ ನನಗುಂಟೇ? ಜೀವನಪರ್ಯಂತ ಹಿಂಸೆ ನೀಡುವುದನ್ನೆ ಅರಮನೆಯ ಕಾನೂನು ಉದ್ಯೋಗ ಎಂದು ಬಗೆದು ಬದುಕಿದೆ. ಈ ನೌಕರಿಯ ನಿಮಿತ್ತ ತಂದ ಹೆಂಗಸರೆಲ್ಲ ತಿಪ್ಪೆಯ ಕಸವಾಗಿ ಹೋದರು...' (ಪು. ೪೮) ಎಂಬುದಾಗಿ ತನ್ನ ವೃತ್ತಿಯ ಬಗ್ಗೆ

ವ್ಯಥೆಪಟ್ಟು ಚಿಂತಿಸುತ್ತಾನೆ. ಕೊನೆಗೆ ತನ್ನ ಮಗನ ಹೀನ ಕೃತ್ಯಗಳಿಗಾಗಿ ಮರುಗಿ ನದಿಗೆ ಬಿದ್ದು ಸಾಯುತ್ತಾನೆ.

"ಟಿಪ್ಪುವನ್ನು 'ಧರ್ಮಾಂಧ' ಮುಸಲ್ಮಾನ ಮತಾಂಧ' 'ಹಿಂದೂ ವಿರೋಧಿ' ಎಂದು ಕರೆಯುವ ಒಂದು ವರ್ಗವಿರುವಂತೆ ಅದಕ್ಕೆ ತದ್ವಿರುದ್ಧವಾದ ಅವನೊಬ್ಬ 'ದೇಶಪ್ರೇಮಿ' 'ಹಿಂದೂಗಳ ಸ್ನೇಹಿತ' 'ದಕ್ಷ ಆಡಳಿತಗಾರ' ಎಂದು ಕರೆಯುವ ಮತ್ತೊಂದು ವರ್ಗವೂ ಇದೆ. ಕೃಷ್ಣಮೂರ್ತಿ ಹನೂರರ ಈ ಕಾದಂಬರಿಯಲ್ಲಿ ಈ ದ್ವಿದಳ ವಿಭಜನೆಯಲ್ಲಿ ಒಂದು ದಳದ ಸಮರ್ಥನೆಯನ್ನಾಗಲಿ ಮತ್ತೊಂದು ದಳದ ಭರ್ತ್ಸನೆಯನ್ನಾಗಲೀ ಮಾಡುವ ಮಾರ್ಗವನ್ನು ಬಿಟ್ಟುಕೊಟ್ಟಿರುವುದು ಅದರ ವೈಶಿಷ್ಟ್ಯ."[೬]

ದಳವಾಯಿ ಉನ್ನತ ಪದವಿಯಲ್ಲಿದ್ದರೂ ರಾಜದ್ರೋಹಿಯಾಗಿಯೇ ಉಳಿಯುತ್ತಾನೆ. ತಂದೆಯ ವೃತ್ತಿ ಕಟುಕತನವಾದರೂ ಅವನ ವ್ಯಕ್ತಿತ್ವ ಮಾದರಿಯಾಗಿದೆ. ದಳವಾಯಿಯ ವೃತ್ತಿ ಶ್ರೇಷ್ಠವಾದರೂ ಕಟುಕನಂತೆ ಜನಸಾಮಾನ್ಯರನ್ನು ಹಿಂಸಿಸುತ್ತಾನೆ. ಇದು ತಂದೆ ಮಗನಿಗಿರುವ ಅಂತರವನ್ನು ಸೂಚಿಸುತ್ತದೆ. ತಂದೆ ಕಟುಕ ವೃತ್ತಿಯನ್ನು ಅವನ ದೈಹಿಕ ವ್ಯಕ್ತಿತ್ವವನ್ನು ವರ್ಣಿಸುತ್ತಾ ನಿಂದಿಸುವ ದಳವಾಯಿ ಕೊನೆಯಲ್ಲಿ ತನ್ನ ತಂದೆ ತನಗಾಗಿ ಮಾಡಿದ ಸೇವೆಯನ್ನು ನೆನೆದು ಪಶ್ಚಾತಾಪ ಪಡುತ್ತಾನೆ.

**ಒನಕೆ ಓಬವ್ವ :**

'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ಅನೇಕ ಸ್ತ್ರೀ ಪಾತ್ರಗಳು ಕಂಡುಬರುತ್ತದೆ. ಅವುಗಳಲ್ಲಿ ಐತಿಹಾಸಿಕ ದಾಖಲೆಯಾಗಿ ಉಳಿಯುವ ಓಬವ್ವನ ಪಾತ್ರವೂ ಒಂದು. ಹೈದರಾಲಿ ಸೈನ್ಯವು ಚಿತ್ರಕಲ್ಲು ದುರ್ಗಕ್ಕೆ ಮುತ್ತಿಗೆ ಹಾಕಿದಾಗ ಜೀವಕ್ಕಂಜದೆ ಹೈದರ್ ಸೈನಿಕರನ್ನು ಬಡಿದು ನೆಲಕ್ಕುರುಳಿಸಿದ ಓಬವ್ವನ ಸಾಹಸವನ್ನು ದಳವಾಯಿ ಈ ರೀತಿ ವರ್ಣಿಸಿದ್ದಾರೆ. 'ನನ್ನ ಏರುಪ್ರಾಯದ ಹುಚ್ಚು ಉತ್ಸಾಹವೆಲ್ಲವೂ ಉಡುಗಿ ಹೋಗುವಂತೆ ಘಟನೆಯೊಂದು ಜರುಗಲ್ಪಟ್ಟಿದೆ. ದುರ್ಗದ ಪಡುವಣ ದಿಕ್ಕಿನಲ್ಲಿ ನಮ್ಮ ಸಿಪಾಯಿಗಳು ಕಳ್ಳಗಿಂಡಿಯೊಂದನ್ನು ಪತ್ತೆ ಹಚ್ಚಿದರು. ಸದ್ದು ಗದ್ದಲವಿಲ್ಲದೆ ಆ ಕಳ್ಳಗಿಂಡಿಯಲ್ಲಿ ನಮ್ಮ ಸಿಪಾಯಿಗಳ ಸಮೂಹ ಕೋಟೆಯೊಳಗೆ ನುಗ್ಗುವ ಸಾಹಸಗೈದರು. ಕೋಟೆಯ ಒಳಭಾಗಕ್ಕೆ ತಲೆ ತೂರಿಸುತ್ತಿದ್ದರೋ ಇಲ್ಲವೋ. ಒಬ್ಬಳೇ ಹೆಂಗಸಿನ ಒಂದೊಂದೇ ಏಟಿಗೆ ಹತ್ತಾರು ತಲೆಗಳು ಛಿದ್ರವಾಗಿ ಹೋದವು. (ಪು. ೧೪೯). ಪುರುಷರ ಸಾಹಸವನ್ನು ಬೆಚ್ಚಿ ಬೆರಗುಗೊಳಿಸುವಂತ ದೃಶ್ಯ ಇದಾಗಿದೆ. ಆದರೆ ಓಬವ್ವನ ಹೆಸರನ್ನು ದಳವಾಯಿಯಾಗಲೀ, ಕಾದಂಬರಿಕಾರರಾಗಲೀ, ಎಲ್ಲಿಯೂ ನಮೂದಿಸಿಲ್ಲ. ದಳವಾಯಿಯ ವರ್ಣನೆಯ ವೃತ್ತಾಂತದ ಹಿನ್ನೆಲೆಯಲ್ಲಿ ಇದು ಓಬವ್ವನ ಕಥೆ ಎಂದು ಗ್ರಹಿಸಬಹುದಾಗಿದೆ.

ಪುರುಷರಿಂದ ದೌರ್ಜನ್ಯಕ್ಕೆ ಒಳಗಾಗಿ ಅಸಹಾಯಕರಂತೆ ಬದುಕುತ್ತಿರುವ ಸ್ತ್ರೀಯರ ನಡುವೆ ಓಬವ್ವನಂತ ವೀರ ಮಹಿಳೆ ಆದರ್ಶವಾಗಿ ನಿಲ್ಲುತ್ತಾಳೆ. ರಾಜ್ಯದ ಒಳಿತಿಗಾಗಿ ವೀರಾವೇಶದಿಂದ ಹೋರಾಡಿದ ಕಥೆ ದಳವಾಯಿಯಂತಹ ಸೈನಿಕರ ಹುಚ್ಚು ಉತ್ಸಾಹವನ್ನು ನಡುಗುವಂತೆ ಮಾಡುತ್ತದೆ.

**ದಳವಾಯಿಯ ರಖಾವು (ದಾಸಯ್ಯನ ಮಗಳು) :**

ದಳವಾಯಿಯ ರಖಾವು ಮಾಡಿ ತಂದ ದಾಸಯ್ಯನ ಮಗಳು ಈ ಕಾದಂಬರಿಯ ಪ್ರಧಾನ ಸ್ತ್ರೀ ಪಾತ್ರವಾಗಿದೆ. ಈಕೆಯ ಪಾತ್ರದ ಮೂಲಕ ಹೆಣ್ಣು ಎಂದಿಗೂ ಅಬಲೆಯಲ್ಲ ಎಂಬುದನ್ನು ತೋರಿಸಿದ್ದಾರೆ. ದಳವಾಯಿ ಒಮ್ಮೆ ಕಂದಾಯ ವಸೂಲಿಗೆಂದು ಹೋದಾಗ ದಾಸಯ್ಯನ ಮಗಳನ್ನು ಕಂಡು ಮೋಹಗೊಳ್ಳುತ್ತಾನೆ. ಎಷ್ಟೋ ಹೆಣ್ಣು ಮಕ್ಕಳನ್ನು ಪುಕ್ಕಟೆಯಾಗಿ ಅನುಭವಿಸಿದ ದಳವಾಯಿ ಮೊದಲ ಬಾರಿಗೆ ತೆರ ಕೊಟ್ಟು ಅವಳನ್ನು ಖರೀದಿಸುತ್ತಾನೆ. ನಿರ್ಗತಿಕನಾದ ದಾಸಯ್ಯ ತೆರದ ಆಸೆಗಾಗಿ ಮಗಳನ್ನು ದಳವಾಯಿಯೊಂದಿಗೆ ಕಳಿಸುತ್ತಾನೆ. ಪರಪುರುಷನೊಂದಿಗೆ ಹೋಗು ಎಂದು ತನ್ನ ತಂದೆ ದಾಸಯ್ಯ ಹೇಳಿದಾಗ ಆಕೆ 'ಕಂಡೋರ ಕೂಟೆ ಹೀಗೆ ರಾತ್ರೋ ರಾತ್ರಿ ನನ್ನ ಕಳ್ಸಕ್ಕಿಂತ ಯಾವುದಾದ್ದರು ಪಾಳು ಬಾವಿಗೆ ತಳ್ಳು ಬಾ' (ಪು.೩೪) ಎಂದು ತಂದೆಯ ಅಸಹಾಯಕತೆಯನ್ನು ಖಂಡಿಸುತ್ತಾಳೆ. ಮತ್ತು ದಳವಾಯಿ ಅವಳನ್ನು ಹೊತ್ತುಕೊಂಡು ಬಂದಾಗ 'ನಿನ್ನ ಅರಮನೆಯೆಲ್ಲ ಕಿತ್ತು ತೂತು ಬಿದ್ದಿದೆಯಲ್ಲ ಕೂರಿಸಿಕೊಂಡು ಬಂದದ್ದೇನೋ ಕುದುರೆಯಲ್ಲಿ, ತೋರಿಸುತ್ತಿರುವುದು ಕಿತ್ತೋದ ವಪ್ಪಾರೆನ್ನು' (ಪು. ೩೫) ಎಂದು ವ್ಯಂಗ್ಯದ ಮಾತುಗಳನ್ನು ಆಡುತ್ತಾಳೆ. 'ನಿನ್ನಂಥ ತಿರುಪೆಯವಳಿಗೆ ಎಂಥ ಅರಮನೆ ಬಿಡು' ಎಂದ ದಳವಾಯಿ ಮಾತಿಗೆ 'ದೇಶ ಆಳುವವರೂ ತಿರುಪೆಯವರೇ ಬಿಡು' (ಪು.೩೭) ಎಂದು ಹೀಯಾಳಿಸುತ್ತಿದ್ದಳು. ಅವಳನ್ನು ಮುಟ್ಟುವುದೆಂದರೆ ದಳವಾಯಿಗೆ ಬೆಟ್ಟ ಏರಿ ಶಿಖರ ಮುಟ್ಟಿ ಸುಸ್ತು ಹೊಡೆದಷ್ಟೆ ಕಷ್ಟವೆನಿಸಿತು. ಅವಳ ಎದುರು ತಾನು ಪುಕ್ಕಲನೇ ಎನಿಸಿಬಿಟ್ಟಿತ್ತು. ಅವನ ಬಳಿ ಕತ್ತಿ ಗುರಾಣಿ ಇದ್ದರೂ ಅವಳಿಗೆ ಕಿಂಚಿತ್ತು ಭಯವೂ ಇರಲಿಲ್ಲ. ಎಲ್ಲಿಯಾದರೂ ಗುಡಿಗೆ ಕರೆದುಕೊಂಡು ಹೋಗಿ ತಾಳಿ ಕಟ್ಟುವಂತೆ ಜುಲುಮೆ ಮಾಡುತ್ತಿದ್ದಳು. ಆದರೆ ದಳವಾಯಿ 'ನಿನ್ನಂಥ ಹೆಣ್ಣು ಏನಿದ್ದರೂ ನನಗೆ ರಖಾವಷ್ಟೆ, ನಿನಗೆ ದಾರ ಕಟ್ಟುವುದಿಲ್ಲ ನಿಮ್ಮಪ್ಪ ಹೇಳಿಕಳುಹಿಸಿರುವಂತೆ ನೀನೇನಿದ್ದರೂ ನನಗೆ ಬಿಟ್ಟಬಸವಿ.' (ಪು.೩೭) ಎನ್ನುತ್ತಿದ್ದನು ಅದನ್ನು ತೀಕ್ಷ್ಣವಾಗಿ ಖಂಡಿಸುವ ಇವಳು ಬೀದಿಯಲ್ಲಿ ಬೆತ್ತಲೆಯಾಗಿ ನಿನ್ನ ಹೆಸರು ಹೇಳಿಕೊಂಡು ಊರ ಮಾರಿಗುಡಿಯ ಮುಂದೆ ಕೂತುಬಿಡುವುದಾಗಿ ಹೇಳುತ್ತಿದ್ದಳು. 'ಹೊತ್ತು ಬಂದವ ಗಂಡಸಲ್ಲ, ಬೆತ್ತಲೆ ಸೇವೆ ನಡೆಸಿ ಈ ಗಂಡಸಿಗೆ ನನ್ನ ಸಲಹುವ ಶಕ್ತಿಯಿಲ್ಲ, ಬರೀದೆ ಮಾನ ಮುಟ್ಟುವ ಚಟ ಎಂದು ಊರೆಲ್ಲ ಸಾರುತ್ತೇನೆ. ನನ್ನ ಮಾನವನ್ನು ಮಾರಿ ನಿನ್ನ ಮಾನವನ್ನು

ಹರಾಜು ಹಾಕುತ್ತೇನೆ' (ಪು. ೩೮) ಎನ್ನುತ್ತಾಳೆ. 'ಎಲೆ ಸಿಪಾಯಿ ನಿನ್ನ ಅರಮನೆಯಲ್ಲಿ ನ್ಯಾಯದ ಘಂಟೆ ಇರುವುದೇನಲೇ? ಇದ್ದರೆ ಅದಕ್ಕೆ ನಾಲಿಗೆ ಉಂಟಾ? (ಪು.೩೮) ಎಂದು ಧೈರ್ಯವಾಗಿ ತನಗಾಗುತ್ತಿರುವ ಅನ್ಯಾಯವನ್ನು ಪ್ರಶ್ನಿಸುತ್ತಾಳೆ. ಕೊನೆಗೊಂದು ದಿನ ದಳವಾಯಿಯನ್ನು ಕೊಲ್ಲಲು ಬಯಸಿ ತನ್ನ ಹೊಟ್ಟೆಯಲ್ಲಿ ಬೆಳೆಯುತ್ತಿದ್ದ ಮಗುವಿನ ರಕ್ಷಣೆಗಾಗಿ ಅವನನ್ನು ಬಿಟ್ಟು ದಳವಾಯಿಯ ವಪ್ಪಾರೆಯಿಂದ ತಪ್ಪಿಸಿಕೊಂಡು ದೊಂಬನ ಜೊತೆ ಕರಿಘಟ್ಟದ ಜಾತ್ರೆಗೆ ತೆರಳುತ್ತಾಳೆ. ಕಾದಂಬರಿಯಲ್ಲಿ ದೊಂಬನ ಪಾತ್ರ ವಿಶಿಷ್ಟವಾಗಿದೆ.

ಕಟ್ಟಿಕೊಂಡ ಮಡದಿಯ ಜೊತೆಯಲ್ಲಿ ಸುಖವಾಗಿ ಸಂಸಾರ ಮಾಡದೆ ಕೂಡಿದವರನ್ನೂ ಅನುಭವಿಸಿ ಕೊಂದು ಹಾಕುವ ಕ್ರೂರ ವ್ಯಕ್ತಿತ್ವದ ದಳವಾಯಿ ಒಂದು ಕಡೆಯಾದರೆ ಕಾಯಿಲೆ ಬಿದ್ದ ಹೆಂಡತಿಯನ್ನು ಬದುಕಿಸಿಕೊಳ್ಳುವ ದೊಂಬನ ಛಲ ಇನ್ನೊಂದು ಕಡೆ ಕಾಣುತ್ತೇವೆ. ಅಧಿಕಾರದಲ್ಲಿರುವ ವ್ಯಕ್ತಿಗೂ ಸಾಮಾನ್ಯ ವ್ಯಕ್ತಿಗೂ ಇರುವ ವ್ಯತ್ಯಾಸವನ್ನು ಇಲ್ಲಿ ಗುರುತಿಸಲಾಗಿದೆ. ಮತ್ತು ಇಲ್ಲಿ ದ್ವಂದ್ವತೆ ಇದೆ. ಜೊತೆಗೆ ಕಾದಂಬರಿಯ ತಂತ್ರವೂ ಇದಾಗಿದೆ. ನಂತರ ಯಾರದೋ ಕೊಟ್ಟಿಗೆಯಲ್ಲಿ ಗಂಡು ಮಗುವಿಗೆ ಜನ್ಮ ನೀಡುತ್ತಾಳೆ. ಆಕೆ ಒಬ್ಬಂಟಿಯಾಗಿ ಇದ್ದುಕೊಂಡು ಮಗನನ್ನು ಬೆಳೆಸುವುದು ಹೆಣ್ಣಿನ ಧೈರ್ಯದ ಸಂಗತಿಯಾಗಿದೆ. ಆದರೆ ವಯಸ್ಸಿಗೆ ಬಂದ ಮಗ ಅವಳನ್ನು ತೊರೆದು ಸನ್ಯಾಸಿಯಾಗಿ ಮನೆ ಬಿಟ್ಟು ಹೋಗುತ್ತಾನೆ. ಅಲ್ಲಿಂದ ಇವಳು ಮಾರಿಗುಡಿಗೆ ಬಿಟ್ಟ ಬಸವಿಯಾಗಿ ಅನಾಥವಾದಳು.

ತನ್ನ ಈ ಸ್ಥಿತಿಗೆ ಕಾರಣನಾದ ಆ ದಳವಾಯಿಯನ್ನು ಸಿಕ್ಕಿದಲ್ಲಿ 'ಅವನ ದೇಹವನ್ನು ಕೊಂದು ದಂಡಿಗೆಯಾಗಿಸಿ, ಮೈಯ ನರವನ್ನು ತಂತಿ ಮಾಡಿ ಅಪ್ಪ ಹೇಳುತ್ತಿದ್ದ ಪದ ಹಾಡಬೇಕೆಂದು ನನಗೆ ಮನಸ್ಸಾಗುತ್ತಿದೆ' (ಪು.೧೧೭) ಎನ್ನುವಲ್ಲಿ ಆಕೆಯ ಮನಸ್ಸಿನಲ್ಲಿ ಇರುವ ನೋವು, ಸಂಕಟಗಳು ಕ್ರೌರ್ಯಗಳಿಗೆ ತಿರುಗುತ್ತಿರುವುದನ್ನು ಕಾಣುತ್ತೇವೆ. ಪುರುಷನ ಗುಣವನ್ನು ಅವಳು ಹೀಗೆ ಪ್ರಶ್ನಿಸುತ್ತಾಳೆ.

ತೆಂಗು ಬಾಳೆಗೆ ಕೊಂಬೆಯುಂಟೆ

ಬದನೆಯ ಗಿಡಕ್ಕೆ ಚಪ್ಪರವುಂಟೆ

ಕೆಂಡದೊಳಗೆ ತನುವುಂಟೆ

ಪುರುಷನಿಗೆ ಗುಣವುಂಟೆ ( ಪು.೧೧೭)

ಎಂದು ಪುರುಷರ ದೌರ್ಜನ್ಯವನ್ನು ಖಂಡಿಸುತ್ತಾಳೆ. ಒಟ್ಟಾರೆ ಕಾದಂಬರಿಯ ಸ್ತ್ರೀ ಪಾತ್ರಗಳಲ್ಲಿ ದಾಸಯ್ಯನ ಮಗಳು ಭಿನ್ನವಾಗಿ ರಚಿಸಲ್ಪಟ್ಟಿದ್ದಾಳೆ.

### ದಳವಾಯಿಯ ಹೆಂಡತಿ :

ದಳವಾಯಿಯ ಹೆಂಡತಿ ಒಬ್ಬ ಅಮಾಯಕ ಹೆಣ್ಣು. ಯುದ್ಧದಲ್ಲಿ ಪರಾಕ್ರಮ ಮೆರೆಯಬೇಕೆಂದು ಕನಸು ಕಾಣುವ ದಳವಾಯಿಯನ್ನು ಕತ್ತಿ ಹಿಡಿದು ಊರುಕೇರಿ, ಕಾಡು ಮೇಡು ತಿರುಗುವುದಕ್ಕಿಂತ ನನ್ನ ಕಣ್ಣಳತೆಯಲ್ಲೆ ಇರಬೇಕು ಅಂತ ಆಸೆ ಪಟ್ಟವಳು. ಆಕೆಯ ಸೌಮ್ಯ ಸ್ವಭಾವ ಎಂತಹ ಕ್ರೂರ ಮನಸ್ಸನ್ನು ಕರಗಿಸುವಂತಿದೆ. ದಳವಾಯಿ ಕದ್ದು ತಂದು ಜೋಪಾನವಾಗಿ ಪೆಟಾರಿಯಲ್ಲಿರಿಸಿದ ಒಡವೆ, ವಸ್ತ್ರಗಳನ್ನು ಎಂದೂ ಕಣ್ಣೆತ್ತಿ ನೋಡಿದವಳಲ್ಲ, ಅವುಗಳ ಮೇಲೆ ಅವಳಿಗೆ ಮೋಹವಿಲ್ಲ. ತನ್ನ ಗಂಡನ ಯೋಗಕ್ಷೇಮದ ಚಿಂತೆಯೇ ಅವಳಿಗೆ ನಿತ್ಯದ ಕಾಯಕ. 'ನನ್ನ ಬಸಿರು ಬರಿದಾಗುತ್ತಿದೆ'. (ಪು. ೧೫೬) ಎನ್ನುವಲ್ಲಿ ಸ್ತ್ರೀ ಸಹಜವಾದ ಬಯಕೆಯಂತೆ ಆಕೆ ಮಗುವಿಗೆ ಹಂಬಲಿಸುತ್ತಾಳೆ. ಅವಳು ತನ್ನ ಗಂಡನಿಗೆ ವಿರುದ್ಧವಾಗಿ ಎಂದೂ ನಡೆದುಕೊಳ್ಳಲಿಲ್ಲ. ಆದರೆ ದಳವಾಯಿಗೆ ಹೆಂಡತಿ ಎಂದರೆ ಕೇವಲ ಅನ್ನ ಆಮ್ರ ಬೇಯಿಸಿಕೊಂಡು ಬಿದ್ದಿರಬೇಕಾದ ಕೆಲಸದವಳು. ಟಿಪ್ಪು ಖಾವಂದರಿಂದ ಮೆಚ್ಚುಗೆ ಗಳಿಸಿ ದಳವಾಯಿ ಪದವಿಗಿಂತ ಉನ್ನತ ಹುದ್ದೆಯನ್ನು ಹೊಂದಲು ಪ್ರಯತ್ನಿಸುವ ತನ್ನನ್ನು ಅರಮನೆಯನ್ನು ಬಿಟ್ಟು ಬಿಡು ಎನ್ನುವ ಅವಳನ್ನು ಮೂರುಕಾಸಿಗೂ ಬಾರದವಳು ಎಂದೂ ತನಗೆ ತಕ್ಕ ಹೆಂಡತಿಯಲ್ಲವೆಂದೇ ಜರೆಯುತ್ತಾನೆ.

ಟಿಪ್ಪು ಸುಲ್ತಾನನ ಆಜ್ಞೆಯಂತೆ ದಳವಾಯಿ ಹರದನಪುರದ ಧಾರ್ಮಿಕ ಗಲಭೆ ನಿಯಂತ್ರಣಕ್ಕೆ ನಿಯೋಜನೆಗೊಂಡು ಹೊರಟಾಗ ಅವನ ಅನುಪಸ್ಥಿತಿಯಲ್ಲಿ ಅವನಿಗಾಗಿ ಹಂಬಲಿಸಿ ಹುಚ್ಚಿಯಾಗಿ 'ಇಲ್ಲೆ ನನಗಂಡ ಕುದುರೆ ಏರಿಕೊಂಡು ವೋದ. ವಳೆ ನೀರು ದಾಟಿಹೋದ. ಅವುನು ವಾಪ್ಸು ಬತ್ತಾ ಇದ್ದದ್ದು ಇಲ್ಲೆ. ಈಗ ಬತ್ತನೆ, ಬತ್ತನೆ ಇಲ್ಲೆ ಕುಂತ್ಕಂಡು ಕಾಯ್ತಿನಿ. ಬತ್ತಿದ್ದಂಗೆ ಅಟ್ಟಿಗೆ ಕರಕ್ಕೊಂಡೋಗಿ ಅನ್ನ ಮಾಡಿ ಇಕ್ತೀನಿ' ಎಂದು ಹೊಳೆದಂಡೇಲೇ ಕೂತು ಅವನಿಗಾಗಿ ಕಾಯುತ್ತಿದ್ದಳು. ಕಡೆಗೆ ಅವನನ್ನು ಹುಡುಕುತ್ತ ಹೊರಟು ಅವನೇ ಹಿಡಿದು ತಂದ ಹುಲಿ ಬಾಯಿಗೆ ಬಲಿಯಾದಳು. ದಳವಾಯಿ ಅವಳ ಕೊಳೆತು ನಾರುವ ಹೆಣವನ್ನು ಹುಡುಕಿ ಸ್ವತಃ ದಫನ್ ಮಾಡಿ ಗಂಡನ ಕರ್ತವ್ಯವನ್ನು ಪೂರೈಸುತ್ತಾನೆ.

### ಸೈನಿಕನ ಮಡದಿ :

ದಳವಾಯಿ ಹೆಂಡತಿಯ ಗುಣವನ್ನು ನಿರೂಪಿಸುವ ಪಾತ್ರವಿದು. ಹಾಗೆಯೇ ಯುದ್ಧ ಪೀಡಿತ ಸೈನಿಕನ ಮನಸ್ಥಿತಿಯನ್ನು ಕಟೋರವಾಗಿ ಟೀಕಿಸುವ ಪಾತ್ರವಾಗಿ ಮೂಡಿ ಬಂದಿದೆ. ಈಕೆ ದಳವಾಯಿಯ ಸಂಸಾರದ ಬೇಜಾವಾಬ್ದಾರಿಯನ್ನು ಖಂಡಿಸುತ್ತಾಳೆ. ನೆರಮನೆಯ ಸೈನಿಕನ ಮಡದಿ ದಳವಾಯಿಯ ಹೆಂಡತಿಯ ವ್ಯಥೆಯ ಕಥೆಯನ್ನು ಹೇಳುತ್ತಲೇ ದಳವಾಯಿಯನ್ನೂ ಪುರುಷರ

ಪೌರುಷವನ್ನು ಪ್ರಶ್ನಿಸುತ್ತಾಳೆ. ದಳವಾಯಿ 'ನಿಮ್ಮಂತಹ ಸಿಪಾಯಿಗಳಿಗೆ ಕಟ್ಕಂಡವ್ರೂ, ಇಟ್ಕಂಡವ್ರೂ ಬೇಕಿಲ್ಲ. ಇಬ್ರು ಕಾಲ ಕೆಳಗಳ ಹೆಕ್ಕಡ ಅನ್ನು.' (ಪು.೧೭೧) ಎಂದು ಕೇಳುವಲ್ಲಿ ದಳವಾಯಿಯ ಸ್ವೇಚ್ಛಚಾರದ ನಡವಳಿಕೆಯನ್ನು ಪ್ರಶ್ನಿಸುತ್ತಾಳೆ. ಮನೆಯಲ್ಲಿರುವ ಮಡದಿಯರ ಬದುಕಿನ ಹೀನಾಯ ಸ್ಥಿತಿಯನ್ನು ಹೇಳಿಕೊಳ್ಳುತ್ತಾಳೆ. 'ನಾವು ಹೆಂಗಸರು ಪಿರಂಗಿ ಸದ್ದು ಕೇಳನೋ, ಸಾಯಂತ ಸಿಪಾಯಿಗಳ ನರಳಾಟ ಕೇಳನೋ, ಇದೆಲ್ಲ ಕೇಳಿಸ್ಕಂಡು ಮನೆ ತೊಟ್ಟುಲು ವಳಗೆ ಬೆಚ್ಚಿ ಬೀಳುವಂಥ ಕೂಸ್ನ ಸಮಾಧಾನ ಮಾಡದೆಂಗೆ? ಲಡಾಯದಲ್ಲಿ ನಿಂತು ಹೊಡೆದಾಡುವವರಿಗೆ ಮಾತ್ರ ಈ ಯಾವ ಸದ್ದು ಕೇಳ್ಸಲ್ಲವಲ್ಲ.' (ಪು.೧೮೦) ಎಂದು ಯುದ್ಧದ ಪರಿಣಾಮವಾಗಿ ಹೆಣ್ಣು ಅನುಭವಿಸುವ ದುರಂತ ಬದುಕನ್ನು ಹೇಳುತ್ತಾಳೆ. 'ನಾವೆಲ್ಲ ಬದುಕಿರುವಾಗಲೇ ಸಮಾಧಿಯಾಗುವವರು, ಸತ್ತ ಮೇಲೆ ಸಮಾಧಿ ಯಾಕೆ ಬೇಕು? (ಪು.೧೮೧) ಎಂದು ಪ್ರಶ್ನಿಸುವ ಅವಳ ದೈನ್ಯಸ್ಥಿತಿ ಹೆಣ್ಣಿನ ಬದುಕಿಗೆ ಹಿಡಿದ ಕನ್ನಡಿಯಾಗಿದೆ. 'ರಾತ್ರಿ ಹೊತ್ತು ಕಲ್ಲು ಕರಗಿದಂತೆ! ರಕ್ತ ಸುರಿಯದನ್ನ ಮಂದಿ ಸಾಯದನ್ನು ಕಂಡು ನಾಗೆದ್ದೆ ನಾಗೆದ್ದೆ ಅನ್ನವುರು ಕರಗದುಂಟಾ ದಳವಾಯಿ?' ಎಂದು ಪ್ರಶ್ನಿಸುವ ಅವಳ ಮಾತು ಪುರುಷರ ಪೌರುಷವನ್ನು ಅಣಕಿಸುತ್ತದೆ.

---

ಅಡಿಟಿಪ್ಪಣಿಗಳು :

೧. ನರಹಳ್ಳಿ ಬಾಲಸುಬ್ರಹ್ಮಣ್ಯ, ಪ್ರಜಾವಾಣಿ,(ಲೇ), ೨೧.೦೪.೨೦೧೩, ಪು.೦೬.

೨. ಟಿ.ಪಿ.ಅಶೋಕ, (ಲೇಖನ–ಕೃಷ್ಣಮೂರ್ತಿ ಹನೂರರ 'ಅಜ್ಞಾತನೊಬ್ಬನ ಆತ್ಮಚರಿತ್ರೆ') ಕಸ್ತೂರಿ ಪತ್ರಿಕೆ, ಸೆಪ್ಟಂಬರ್ ೨೦೧೨

೩. ಟಿ.ಪಿ.ಅಶೋಕ, (ಲೇಖನ–ಕೃಷ್ಣಮೂರ್ತಿ ಹನೂರರ 'ಅಜ್ಞಾತನೊಬ್ಬನ ಆತ್ಮಚರಿತ್ರೆ') ಕಸ್ತೂರಿ ಪತ್ರಿಕೆ, ಸೆಪ್ಟಂಬರ್ ೨೦೧೩

೪. ಪ್ರತಿಸ್ಪಂದನ ಎಚ್.ಎಸ್. ಶಿವಪ್ರಕಾಶ್ ಪ್ರಾಜಾವಾಣಿ ದಿನ ಪತ್ರಿಕೆ ೧೫ ನೇ ಫೆಬ್ರವರಿ ೨೦೧೩

೫. ಡಾ.ಜಿ.ಎನ್. ಉಪಾಧ್ಯ, ಗಾಂಧಿ ಬಜಾರ್ ಪತಿಕೆ, ಜೂನ್ ೨೦೧೩, ಪು.೧೩

೬. ಟಿ.ಪಿ. ಅಶೋಕ ಸಾಹಿತ್ಯ ಸಮೃದ್ಧಿ ೨೦೧೩, ಪು.ಸಂ. ೬೦

# ಅಧ್ಯಾಯ : ೬

## ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯ ತಂತ್ರ ಮತ್ತು ಶೈಲಿಯ ಅಧ್ಯಯನ

ಈ ಕಾದಂಬರಿಯಲ್ಲಿ ದಳವಾಯಿಯೊಬ್ಬನ ಆತ್ಮಕಥೆ ತಂತ್ರಗಾರಿಕೆಯಿಂದಲೇ ನಿರೂಪಣೆಗೊಂಡಿದೆ. ತನ್ನ ಆತ್ಮಚರಿತ್ರೆಯನ್ನು ಬರೆದ ದಳವಾಯಿಯೇ ಕಾದಂಬರಿಯ ನಿರೂಪಕನಾಗಿದ್ದಾನೆ. ಇವನ ಪದ ಸಂಪತ್ತಿನ ಮಿತಿಯಲ್ಲಿ ಆಡುಭಾಷೆಯಲ್ಲಿ ರಚನೆಗೊಂಡ ಕಥೆಯನ್ನು ಕಾದಂಬರಿಕಾರನು ಶಿಷ್ಟಭಾಷೆಯ ಕ್ರಮದಲ್ಲಿ ಎಣೆಯುತ್ತಾ ಹೋಗಿದ್ದಾರೆ. ತನ್ನ ಜೀವನದ ಜೊತೆ ಸಂಭಾಷಣೆ ನಡೆಸುವ ಪಾತ್ರಗಳ ಮನಸ್ಥಿತಿಯನ್ನು ಅವರ ಮಾತುಗಳನ್ನು ದಳವಾಯಿಯೇ ಹೇಳುತ್ತಾ ಹೋಗುತ್ತಾನೆ. ಆತ್ಮಚರಿತ್ರೆಯನ್ನು ಒಳಗೊಂಡ ಕೃತಿ ಇದಾದರೂ ಇದನ್ನು ಕಾದಂಬರಿಯಾಗಿ ಪರಿವರ್ತಿಸಿ ಇದರಲ್ಲಿ ಕಥನ ನಿರೂಪಣಾ ಶೈಲಿಗಳನ್ನು ಬಳಸಿರುವುದು ಸಹಜವಾಗಿದೆ.

[1]"ಕೃಷ್ಣಮೂರ್ತಿ ಹನೂರರ ಕಾದಂಬರಿಯಾದ ಅಜ್ಞಾತನೊಬ್ಬನ ಆತ್ಮಚರಿತ್ರೆ ವಿಮರ್ಶಕರ ಮೆಚ್ಚುಗೆಯನ್ನು ಪಡೆದ ಶ್ರೇಷ್ಠ ಕೃತಿಯಾಗಿದೆ. ಇವರು ಅಧ್ಯಯನ ಸಂಸ್ಥೆಯಲ್ಲಿ ಅಧ್ಯಾಪನ ಮತ್ತು ಸಂಶೋಧನೆ ಮಾಡುತ್ತಾ ಜನಪದ ಕೃತಿಗಳ ಸಂಪಾದನೆ, ಸಂಗ್ರಹ, ವಿಮರ್ಶೆ, ಚಿಂತನೆಗಳನ್ನು ಕುರಿತು ಹಲವು ಗ್ರಂಥಗಳನ್ನು ಅಲ್ಲದೆ ಹಲವು ಕಥಾಸಂಗ್ರಹ, ಕಾದಂಬರಿಗಳನ್ನು ರಚಿಸಿದ್ದಾರೆ. ಅವರ ಸೃಜನಶೀಲ ಬರಹಗಳು ಕನ್ನಡದ ಮಾರ್ಗೀಯ ಮತ್ತು ಜನಪದ ಕಥನ ಪರಂಪರೆಗಳ ಸಾರವನ್ನು ಒಳಗೊಂಡು ಮೈಸೂರು, ಕೊಳ್ಳೆಗಾಲ ಪ್ರದೇಶದ ವಿಶಿಷ್ಟ ಆಡುಭಾಷೆ ಸೊಗಡಿನಿಂದ ಮನಸೆಳೆಯುತ್ತವೆ"[1] ಎಂದು ಎಚ್.ಎಸ್. ಶಿವಪ್ರಕಾಶ್ ರವರು ಹೇಳುತ್ತಾರೆ.

ಕಾದಂಬರಿಯ ಕಥೆ ಸಿಂಹಾವಲೋಕನ ಕ್ರಮದಲ್ಲಿ ಹೆಣೆಯಲ್ಪಟ್ಟಿದೆ. ಕಾದಂಬರಿಯ ಕೇಂದ್ರ ವ್ಯಕ್ತಿಯೇ ದಳವಾಯಿ. ಆತನ ಜೀವನ ಚರಿತ್ರೆಯೇ ಕಾದಂಬರಿಯ ಕಥಾವಸ್ತು. ಕಾದಂಬರಿಯಲ್ಲಿ ಕಥೆಯನ್ನು ಹೇಳುವಾಗ ಮೊದಲು ಹುಟ್ಟು, ಬಾಲ್ಯ, ಯೌವನ, ಮುಪ್ಪು ಹೀಗೆ ಕ್ರಮವಾಗಿರದೆ ಯೌವನದಲ್ಲಿ ಇದ್ದಾಗ ಆಡಿದ ಪುಂಡಾಟಿಕೆಗಳನ್ನು ನೆನೆಯುತ್ತಲೇ ಬಾಲ್ಯದ ಜೀವನ, ತಂದೆಯ ಕಟುಕವೃತ್ತಿ, ಕಳ್ಳತನ ಮಾಡಿದಾಗ ತೋರುತ್ತಿದ್ದ ಭಂಡ ಧೈರ್ಯ, ಹೆಣ್ಣುಗಳನ್ನು ರಖಾವು ಮಾಡುವುದು, ಅಪ್ಪ ತಂದ ಸೊಸೆಯನ್ನು ಸಂತೋಷದಿಂದ ಇಡಲು ಆಗದೆ ಮಡದಿಯ ಸಾವಿಗೆ ತಾನೇ ಕಾರಣನಾಗುವುದು, ಹೈದರಾಲಿಯ ಜೊತೆ ಯುದ್ಧ ಮಾಡಿದ ನೆನೆಪು ಟಿಪ್ಪು ಸುಲ್ತಾನನ ಆತ್ಮೀಯನಾಗಿ ಆತನ ಮನೋವೇದನೆಯನ್ನು ಹತ್ತಿರದಿಂದ ಕಂಡದ್ದು ಇಷ್ಟೆಲ್ಲ ವಿಷಯ ಸಂಗತಿಗಳನ್ನು ವರ್ಣಿಸುತ್ತಲೇ ಬರುತ್ತಾನೆ. ಕೊನೆಯಲ್ಲಿ ಕತ್ತಿಯಂಚಿನ ಮೊನೆಯಿಂದ ಹೊಟ್ಟೆಗೆ ಆದ ಗಾಯ ದಳವಾಯಿಯ ಬದಲಾವಣೆಗೆ ಕಾರಣವಾಗುತ್ತದೆ. ಜನರು ತೋರುವ ಆದರದ ಪ್ರೀತಿ

ವಿಶ್ವಾಸ ಅಭಿಮಾನ ಅವನನ್ನು ದಾಸಯ್ಯ ಎಂದು ಸಂಭೋದಿಸುವ ಕ್ರಮ ಇವುಗಳು ನಿಜವಾಗಿಯೂ ದಳವಾಯಿಯನ್ನು ಒಬ್ಬ ಮನುಷ್ಯನನ್ನಾಗಿಸುತ್ತದೆ. ಆದ್ದರಿಂದಲೇ ದಳವಾಯಿ ಆರಂಭದಿಂದಲೂ ತನ್ನ ಕಥೆಯನ್ನು ಕಥಾವಸ್ತುವನ್ನು ವಿವರಿಸುತ್ತಿದ್ದರೂ ಆತ್ಮವಿಮರ್ಶೆಯೊಂದಿಗೆ ಕಥೆ ಹೇಳಿರುವುದು ಈ ಕಾದಂಬರಿಯ ಶ್ರೇಷ್ಠತೆಯಾಗಿದೆ.

[೨]"ವಸ್ತು ಮತ್ತು ತಂತ್ರ ಈ ಎರಡು ದೃಷಿಯಿಂದ ಕೃಷ್ಣಮೂರ್ತಿ ಹನೂರು ಅವರು ಹೇಳಿರುವ ಅಜ್ಞಾತನೊಬ್ಬನ ಆತ್ಮ ಚರಿತ್ರೆ ಕನ್ನಡ ಕಾದಂಬರಿಗಳಲ್ಲೆ ತುಂಬ ವಿಶಿಷ್ಟವಾಗಿದೆ. ಹೈದರಾಲಿ ಮತ್ತು ಟಿಪ್ಪು ಸುಲ್ತಾನರನ್ನು ಅವರ ಕಾಲವನ್ನು ಓರ್ವ ದಳವಾಯಿಯ ಪ್ರಜ್ಞೆಯಲ್ಲಿಸೆರೆಹಿಡಿಯುವ ಮಹತ್ವಾಕಾಂಕ್ಷೆ ಈ ಕಥಾನಕದು ಅದಕ್ಕಾಗಿ ಅವರು ಅವಲಂಬಿಸುವ ಅಕರಗಳೂ ತೀರ ಭಿನ್ನ. ಶಿಷ್ಟ ಇತಿಹಾಸದ ರಾಜಮಾರ್ಗವನ್ನು ತೊರೆದು ಲೇಖಕರು ಜಾನಪದ ಕತೆಗಳು ಐತಿಹ್ಯಗಳು ಮತ್ತು ದಂತ ಕತೆಗಳನ್ನು ಆಶ್ರಯಿಸಿರುವುದರಿಂದ ಇಲ್ಲಿ ಕೇಳಿಸುವ ಧ್ವನಿ ಅನನ್ಯವಾಗಿದೆ."[೨]

ಕಾದಂಬರಿಯಲ್ಲಿ ಬರುವ ಪ್ರತಿಯೊಂದು ಪಾತ್ರ ಸನ್ನಿವೇಶಗಳನ್ನು ವೃತ್ತಾಂತಗಳ ಮೂಲಕ ದೃಶ್ಯಗಳ ಮೂಲಕ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ. ಹುಲಿ ಬೇಟೆಗೆಂದು ಕಾಡಿಗೆ ಹೋಗುವ ಸಂದರ್ಭ ಮಹಾಭಾರತದ ನಾಟಕದ ಚಿತ್ರಣ ಮುಂತಾದವುಗಳು ಅಭಿನಯಿಸಿ ತೋರಿಸಬಹುದು. ಎಂಬಂತೆ ಚಿತ್ರಿಸಿದ್ದಾರೆ. ಮಿಕ್ಕೆಡೆಗಳಲ್ಲಿ ವೃತ್ತಾಂತವೇ ಸಾಕಷ್ಟಿದೆ ಕಾದಂಬರಿಯ ಮತ್ತೊಂದು ನಿರೂಪಣಾ ಶೈಲಿ ಎಂದರೆ ಚಿತ್ರಪಟದ ವರ್ಣನೆ. ಕಾದಂಬರಿಯಲ್ಲಿ ದಳವಾಯಿ ಹೇಳಿರುವ ಕಥೆಯನ್ನು ಸನ್ನಿವೇಶವನ್ನು ಚಿತ್ರಪಟದ ಮೂಲಕ ಬಿಡಿಸಿರುವುದು. ಗಮಕದ ಗಣಪಯ್ಯನ ನಿರೂಪಣಾ ಶೈಲಿಯಲ್ಲಿ ಕಾದಂಬರಿಯಲ್ಲಿ ಅದನ್ನು ಒಂದು ಅಧ್ಯಾಯವಾಗಿಯೇ ಮೀಸಲಿರಿಸಿ ವರ್ಣಿಸಿರುವುದು ಹನೂರರ ನಿರೂಪಣಾ ಶೈಲಿಯನ್ನು ಮತ್ತು ಅವರು ಗ್ರಹಿಸುವ ಸಾಮಾರ್ಥ್ಯವನ್ನು ತೋರಿಸುತ್ತದೆ.

ಕಾದಂಬರಿಯಲ್ಲಿ ನಾಟಕೀಯತೆಯ ತಂತ್ರವನ್ನು ಕೂಡ ಬಳಸಿದಾರೆ. ಉದಾಹರಣೆಗೆ ತನ್ನ ಮಡದಿಯನ್ನು ಹುಡುಕಿಕೊಂಡು ಬಂದ ದಳವಾಯಿಗೆ ರಣರಂಗದ ಸ್ಥಿತಿಯನ್ನು ಸೈನಿಕನ ಹೆಂಡತಿ ವಿವರಿಸುವುದು ಕಾದಂಬರಿಯ ನಾಟಕೀಯತೆಗೆ ಉತ್ತಮ ನಿದರ್ಶನವಾಗಿದೆ. ಜೊತೆಗೆ ಭೂತಕಾಲ ವರ್ತಮಾನ ಕಾಲದ ಸ್ಥಿತಿಯನ್ನು ಇಲ್ಲಿ ಕೊಡಲಾಗಿದೆ. ಕಾದಂಬರಿಯಲ್ಲಿ ಬಹಳ ಕಡೆ ಗಮನಿಸಬೇಕಾದ ಅಂಶವೆಂದರೆ ದಳವಾಯಿಗೆ ಬೀಳುವ ಕನಸುಗಳು. ಇವುಗಳನ್ನು ಮನೋ ವೈಜ್ಞಾನಿಕವಾಗಿ ಹೇಳುವುದಾದರೆ ಮನುಷ್ಯ ತಾನು ಎಸಗುವ ಪಾಪ ಕೃತ್ಯಗಳಿಗೆ ಅನುಗುಣವಾಗಿ ರಾತ್ರಿ ವೇಳೆಯಲ್ಲಿ ಬೀಳುವ ಕನಸು ಅವನಿಗೆ ತನ್ನ ಪ್ರಯಶ್ಚಿತಕ್ಕೆಂದು ಮನಸ್ಸು ಹಂಬಲಿಸುತ್ತದೆ. ಅಂದರೆ ವ್ಯಕ್ತಿ ತಾನು ಮಾಡಿದ ತಪ್ಪಿಗೆ ಅಥವಾ ತನ್ನ ತಪ್ಪಿನ ಅರಿವು ಮೂಡಿಸುವುದು ಒಂದು

ವಿಧಾನವಾದರೆ. ಇನ್ನೊಂದು ಹಗಲು ಹೊತ್ತಿನಲ್ಲಿ ಈಡೇರಿಸಿಕೊಳ್ಳಲಾರದ ಬಯಕೆಗಳು ಕನಸಿನಲ್ಲಿ ಅನುಭವಿಸುವುದು. ಹೀಗೆ ಕನಸಿಗೆ ನಾನಾ ಮುಖಗಳಿವೆ. ಆದರೆ ಕಾದಂಬರಿಯಲ್ಲಿ ದಳವಾಯಿ ಅಧಿಕಾರದ ಹುಂಬತನದಲ್ಲಿ ಎಷ್ಟೆ ಮೆರೆದರೂ ಅವನ ಮನಸ್ಸು ಅವನ ಕನಸುಗಳು ಅವನ ತಪ್ಪುಗಳ ಅರಿವನ್ನು ಸೂಚಿಸುತ್ತಿರುತ್ತದೆ. 'ಜನ ತಿರುಗಿ ನನ್ನ ಬಳಿ ಓಡಿ ಬಂದರು ಮತ್ತೆ ಹೊತ್ತುಕೊಂಡು ಹೋಗಿ ಕೊಂಡಕ್ಕೆ ಹಾಕಿಬಿಟ್ಟರೆ ಎನ್ನಿಸಿ ಅಸಾಧ್ಯ ಭಯ ಬಿದ್ದು ಬೆಚ್ಚಿದೆ. ದಿಗ್ಗನೆ ಎಚ್ಚರಗೊಂಡು ಕಣ್ಣು ಬಿಟ್ಟರೆ ಸುತ್ತೆಲ್ಲ ಕತ್ತಲೆ. ನಕ್ಷತ್ರಗಳ ಅರೆಬೆಳಕು. ತಾಯಗರ್ಭದಿಂದ ಬಿದ್ದ ಶಿಶು ಭಯ ವಿಹ್ವಲತೆಯಿಂದ ಬಾಯ್ದೆರೆದು ಅಳುವಂತ ಸ್ಥಿತಿ. (ಪು.೬೯). ಎನ್ನುವಲ್ಲಿ ದಳವಾಯಿ ಹಗಲು ಹೊತ್ತು ಮಾಡಿದ ಕೆಟ್ಟ ಕೆಲಸಗಳಿಗೆ ರಾತ್ರಿ ಶಿಕ್ಷೆ ಅನುಭವಿಸುವ ದೃಶ್ಯ. ಈ ರೀತಿಯ ಕನಸು ಕಾದಂಬರಿಯಲ್ಲಿ ಅನೇಕ ಕಡೆ ಬಂದಿದೆ. ಅವನ ತಪ್ಪುಗಳನ್ನು ಗುರುತಿಸುತ್ತಿದ್ದರಿಂದಲೇ ದಳವಾಯಿ ಆತ್ಮ ವಿಮರ್ಶೆಯನ್ನು ಮಾಡಿಕೊಳ್ಳಲು ಸಾಧನವಾಗಿದೆ. ಕನಸುಗಳ ಮೂಲಕ ದಳವಾಯಿ ಆತ್ಮವಿಶ್ಲೇಷಣೆ ಮಾಡುವುದು ಕಾದಂಬರಿಯ ತಂತ್ರವಾಗಿದೆ.

ಕಾದಂಬರಿಯ ರಚನೆ ಏಕಾಕೃತಿ ಸ್ವರೂಪದಲ್ಲಿಲ್ಲ. ಅದರ ರಚಾನಾ ಸ್ವರೂಪ ಬಹುಮುಖಿ ನೆಲೆಯನ್ನು ಒಳಗೊಂಡಿದೆ. ಇದು ರಾಜಕೀಯ ದಬ್ಬಾಳಿಕೆಯ ಅರಮನೆಯ ಕಥೆಯೂ ಹೌದು, ಆತ ಇಟ್ಟುಕೊಂಡವಳ ಕಥೆಯೂ ಹೌದು, ರಾಜಕೀಯ ದಬ್ಬಾಳಿಕೆಗೆ ಗುರಿಯಾದ ಜನಸಾಮಾನ್ಯರ ಸಂಕಟದ ಕಥೆಯೂ ಹೌದು. ಎಂಥ ಸಂದರ್ಭದಲ್ಲೂ ಪೊರೆಯುವ ಶಕ್ತಿಯನ್ನು ಕಾಪಾಡಿಕೊಂಡ ಸಮುದಾಯದ ಚೈತನ್ಯದ ಕಥೆಯೂ ಹೌದು. ಈ ಎಲ್ಲವೂ ಒಂದರೊಡನೊಂದು ಹೆಣೆದುಕೊಂಡು ಬಂದಿದೆ. ಆದರೂ ಎಲ್ಲೂ ಜಟಿಲವಾಗದೆ ಜಾನಪದ ಕಥಾ ನಿರೂಪನೆಯ ಶೈಲಿಯನ್ನು ಒಳಗೊಂಡು ದಟ್ಟವಾದ ಅನುಭವವೊಂದನ್ನು ಕಾದಂಬರಿ ಕಟ್ಟಿಕೊಡುತ್ತದೆ.

ಈ ಕಾದಂಬರಿಯ ಭಾಷೆಯನ್ನು ಕುರಿತು ಹೇಳುವುದಾದರೆ ಇದು ಕೊಳ್ಳೇಗಾಲ, ಶ್ರೀರಂಗಪಟ್ಟಣ, ಮೈಸೂರು ಸುತ್ತಮುತ್ತಲಿನ ಭಾಷೆಯನ್ನು ಒಳಗೊಂಡಿದೆ. ಕೃತಿಯಲ್ಲಿ ಗಾದೆ, ಒಗಟು ಮತ್ತು ಜನಸಾಮಾನ್ಯರ ಆಡುಭಾಷೆ ಇದೆ. ಜೊತೆಗೆ ಮುಸಲ್ಮಾನರ ಆಡಳಿತದ ಕಾಲವಾದ್ದರಿಂದ ಈ ಕೃತಿಯಲ್ಲಿ ಅತಿ ಹೆಚ್ಚು ಉರ್ದು ಪದಗಳ ಬಳಕೆಯಾಗಿದೆ. ದಫ್ತರು, ಲಡಾಯಿ, ತಹಲ್, ಇನಾಮು, ಫಾಯಿದೆ, ರಖಾವು, ತಲಾಷು, ಗರೀಬ ಮುಂತಾದ ಉರ್ದು ಪದಗಳು ಬಳಕೆಯಾಗಿದೆ. ಹಾಗೆಯೇ ಆಡುಭಾಷೆಯನ್ನು ಗಮನಿಸುವುದಾದರೆ 'ಹಲವು ಜಾತಿ ಸೊಪ್ಪು ಚಂದ ಹಲವರಿಗುಟ್ಟಿದ ಮಕ್ಕಳು ಚಂದ'(ಪು.೧೧೯) ಮುಂತಾದ ಗಾದೆಗಳು. ಹಾಗೆಯೇ 'ಲೇ ಕೂಸೆ ಮಾತು ಬರದ ಹೆಣ್ಣು ಕೂಸು ನಮಗೆ ಬೇಡ ನಡಿ ಇತ್ತಿಂದಿತ್ಲಾಗೆ (ಪುಟ.೮೫) ಎನ್ನುವಲ್ಲಿ ಆಡುಭಾಷೆ ಕಂಡುಬಂದರೂ ಕಾದಂಬರಿಯುದ್ದಕ್ಕೂ ಕ್ರಮವಾಗಿ ಶಿಷ್ಟಭಾಷೆಯಿಂದ ನಿರೂಪಿಸಿರುವುದು ಕಾದಂಬರಿ ತಂತ್ರಗಾರಿಕೆಯ ಭಾಷಾಶೈಲಿಯಾಗಿದೆ. ಹನೂರರ ಕಾದಂಬರಿಯ ಕಥನ ಕ್ರಮವು ಕುತೂಹಲಕಾರಿ. ಇದರಲ್ಲಿ ಕತೆ, ಉಪಕತೆಗಳು ಜನಪದ ಕಥೆಯಲ್ಲಿರುವಂತೆ

ಒಂದರೊಳಗೊಂದು ಹೆಣೆದುಕೊಂಡು ಹಿಂದು ಮುಂದುಗಳನ್ನು ಬದಲಾಯಿಸುತ್ತಾ ಪಾತ್ರ ಮತ್ತು ಕಥೆಗಾರನ ಒಳಹೊರಗೆ ಸುಳಿಯುತ್ತಾ ಮುಂದುವರೆದರೂ ಎಲ್ಲೂ ಜಟಿಲವಾಗದೇ ಓದುಗರ ಆಸಕ್ತಿಯನ್ನು ಪಟ್ಟಾಗಿ ಹಿಡಿದಿಡುತ್ತದೆ.

**ರಚನಾತಂತ್ರ**

ಟಿಪ್ಪು ಸೈನ್ಯದಲ್ಲಿದ್ದ ದಳವಾಯಿ ಕುದುರೆ ದೇಸಪ್ಪಯ್ಯ ಎಂಬವ ಬರೆದದ್ದು ಎನ್ನಲಾದ ಆತ್ಮಚರಿತ್ರೆಯ ಹಸ್ತಪ್ರತಿಯ ತಿದ್ದಿದ ನಕಲನ್ನು ಓದಿ ಇಂದಿನ ಕಾದಂಬರಿ ರಚಿಸಲಾಗಿದೆ ಎಂಬುದು ಅದರ ರಚನಾತಂತ್ರ, ಕಾಣಿಸುವ ದರ್ಶನ ಒಂದು, ಅದನ್ನು ಕಾಣಿಸಲಿರುವ ಪರಿಕರ ಇನ್ನೊಂದು, ಈ ಮೂಲಕ ಚರಿತ್ರೆಯನ್ನು ನೋಡುವನ ಹೊಸಕ್ರಮ ಒಂದು ಇಲ್ಲಿದೆ. ಅಂತಹ ಕೃತಿಗಳ ಯಶಸ್ಸು ಕಾದಂಬರಿಕಾರರ ಸೃಜನಶೀಲ ಕಲ್ಪನೆಯನ್ನು ಅವಲಂಬಿಸಿದೆ. ಅಲ್ಲಲ್ಲಿ ಐರಿಳಿತಗಳಿಂದ ಕೆಲವೆಡೆ ಅತ್ಯುತ್ತಮ ಒಳನೋಟಗಳಿಂದ ಇನ್ನು ಕೆಲವೆಡೆ ಸಾಮಾನ್ಯ ವಾಖ್ಯಾನಗಳಿಂದ ಈ ಕಾದಂಬರಿ ರಚನಾ ಶಿಲ್ಪ ಅದರ ದರ್ಶನದ ಒಂದು ಭಾಗವೇ ಆಗಿದೆ. ಈ ಕಾದಂಬರಿಯಲ್ಲಿ ತಂತ್ರವೂ ಚರಿತ್ರೆಯ ಗ್ರಹಿಕೆ ಹಾಗೂ ಒಪ್ಪಿತ ನಂಬಿಕೆ ನೆಲೆಗಳ ಪರ ಹಾಗೂ ವಿರೋಧವಾಗಿ ಕೆಲವೊಮ್ಮೆ ಕೆಲಸ ಮಾಡುವ ಕ್ರಮ ಇಲ್ಲಿನ ವೈಚಾರಿಕತೆಗೆ ದೂರ ನಿಂತು ಕಾಣಬಲ್ಲ ಶಕ್ತಿಯನ್ನು ತುಂಬಿದೆ.

ಇದು ಮೂಲದ ಪಾಠಾಂತರ ಮೂಲಕ ಪ್ರತಿಪಾದಿತವಾಗಿದೆ, ಕಾವೇರಿಪುರದ ತೋಪಿನಲ್ಲಿ ವೀರಗಲ್ಲಿನಂತೆ ಕಾಣುವ ಒಂದು ಕಲ್ಲು. ಆ ಕಲ್ಲಿನಲ್ಲಿ ಒಂದು ಕುದುರೆ ಚಿತ್ರ ಅದರ ಜೊತೆ ಒಬ್ಬ ಗಡ್ಡಧಾರಿ ಕುದುರೆ ದೇಸಿಗಯ್ಯ ಎಂಬವ ೧೭೯೯ರಲ್ಲಿ ಅಂದರೆ ಟಿಪ್ಪು ಮಾಡಿದ ವರ್ಷ ನಿಧನವಾದ ಮಾಹಿತಿ ಆ ಕಲ್ಲಿನಲ್ಲಿದೆ. ಅವನು ಬರೆದ ಒಂದು ದಪ್ತರು ಜೀರ್ಣಾವಸ್ಥೆಯಲ್ಲಿ ಆ ಊರಿನ ಸುಲೇಮಾನ್ ಸಾಬರ ಮನೆಯಲ್ಲಿ ಇತ್ತು. ಎಷ್ಟೊ ವರ್ಷಗಳ ಬಳಿಕ ಜೀರ್ಣಾವಸ್ಥೆಯಲ್ಲಿದ್ದ ಆ ದಪ್ತರಿನ ಪ್ರತಿ ತೆಗೆದವನು ಕಣ್ಣೂರು ಮಂಗಲದ ಗಮುಗದ ಗಣಪಯ್ಯ. ಅವನು ನಕಲು ಮಾಡುವಾಗ ಐದು ಕಡೆ ರೇಖಾ ಚಿತ್ರಗಳನ್ನು ಬಿಡಿಸಿದ್ದಾನೆ. ಅಪೂರ್ಣ ಜಾನಪದ ಚರಣಗಳನ್ನು ಪೂರ್ಣಗೊಳಿಸಿದ್ದಾನೆ. ಆದರೆ ಅದು ಇಂದಿನ ಕನ್ನಡದಲ್ಲಿ ಇಲ್ಲ. ಎಂದು ನಿರೂಪಕ ಅದನ್ನು ಇಂದಿನ ಕನ್ನಡದಲ್ಲಿ ಬರೆದಿದ್ದಾನೆ. ಮೂಲಬರೆದ ವ್ಯಕ್ತಿಯೇ ಯಾರೆಂದು ತಿಳಿಯದರಿಂದ ಈ ಆತ್ಮಚರಿತ್ರೆ ಬರೆದವ ಅಜ್ಞಾತ.

[೩]"ಇದೊಂದು ಉಜ್ವಲ ಕಾದಂಬರಿ. ದಳವಾಯಿಯ ಆತ್ಮವೃತ್ತಾಂತವನ್ನು ಚಿತ್ರಿಸುವುದಷ್ಟೆ ಮುಖ್ಯವಾಗದೆ ಆಳವಾದ ಬೌದ್ಧಿಕ ಚಿಂತನೆ, ರಾಜಕೀಯ, ಸಾಮಾಜಿಕ ತಾತ್ವಿಕ ವಿಶ್ಲೇಷಣೆ ಒಳಿತು ಕೆಡಕುಗಳ ಸಂಘರ್ಷ ಮನುಷ್ಯ ಸ್ವಭಾವದ ವಿಶ್ಲೇಷಣೆ ಆ ಕಾಲದ ಪರಿಸರ ಸನ್ನಿವೇಶ ನಿರ್ಮಾಣ ಹೀಗೆ ಒದೊಂದು ಅಂಶವೂ ಚೇತೋಹಾರಿಯಾಗಿದೆ. ಈ ಕಾದಂಬರಿಯ ಕುತೂಹಲಕಾರಿಯಾದ

ಕಥನಕ ಮೋಹಕ ಶೈಲಿ ಆತ್ಮ ಚರಿತ್ರೆಯನ್ನು ದಫ್ತರಿನ ಮೂಲಕ ವರ್ಣನೆಯೊಂದಿಗೆ ಹೇಳಿಸಿರುವ ವಿಶಿಷ್ಟ ತಂತ್ರದಿಂದಾಗಿ ವಿಶಿಷ್ಟವಾಗಿದೆ. ಇತಿಹಾಸ ವಾಸ್ತವತೆ ವರ್ತಮಾನದ ಅನಿಶ್ಚಿತತೆಗಳನೆಲ್ಲಾ ಕೂಡಿಕೊಂಡ ಈ ಕಾದಂಬರಿಯ ಈ ಕಾದಂಬರಿಯ ಬಂಧವೂ ಗಟ್ಟಿಯಾಗಿದೆ. ಕಾದಂಬರಿ ತನ್ನ ಕಥನ ಕ್ರಮದಲ್ಲಿ ನಾನಾ ಪರಿಪ್ರೇಕ್ಷ್ಯಗಳನ್ನು ದುಡಿಸಿಕೊಂಡಿದೆ. ಸಾಂಸ್ಕೃತಿಕ ಇತಿಹಾಸವನ್ನು ಇಡೀ ಸಂಸ್ಕೃತಿಯ ಜನ ಬದುಕನ್ನು ಸಾಹಿತ್ಯದ ವಸ್ತುವಾಗಿ ಕಲಾತ್ಮಕವಾಗಿ ಹೇಗೆ ಬಳಸಿಕೊಳ್ಳಬೇಕೆಂಬುದನ್ನು ಬಹು ಪರಿಣಾಮಕಾರಿಯಾಗಿ ಹನೂರರು ತೋರಿಸಿಕೊಟ್ಟಿದ್ದಾರೆ. ಹೊರನೋಟಕ್ಕೆ ಈ ಕಾದಂಬರಿ ಐತಿಹಾಸಿಕವೆನಿಸಿದರೂ ಪ್ರಭುತ್ವದ ಲೊಳಲೊಟ್ಟೆ ಪುರಷಸತ್ತೆಯ ವಿರುದ್ಧ ದನಿಯೆತ್ತುವುದೇ ಆಗಿದೆ."[೩]

ಹಾಗೆಯೇ ೧೭೯೯ ರಲ್ಲಿ ತೀರಿಗೊಂಡ ವ್ಯಕ್ತಿಯ ಮೂಲ ಬರಹ ಈ ಪತ್ಯದಲ್ಲೇ ಮೂರು ಸಲ ಬದಲಾಗಿದೆ. ಟಿಪ್ಪು ಮಡಿದ ಎರಡು ಶತಮಾನಗಳ ಬಳಿಕ ಜನರ ನೆನಪಲ್ಲಿ ಅದು ಎಷ್ಟೆಲ್ಲ ಬದಲಾವಣೆ ಕಂಡಿದೆ ಹಾಗೂ ಇನ್ನೂ ಬದಲಾಗುತ್ತದೆ ಎಂಬುದನ್ನು ಟಪ್ಪು ಬಗ್ಗೆ ಈಗ ನಡೆಯುತ್ತಿರುವ ಚರ್ಚೆಯನ್ನು ಗಮನಿಸುವವರಿಗೆಲ್ಲಾ ವಿವರಿಸಬೇಕಾಗಿಲ್ಲ. ಹನೂರು ಅವರು ಈ ಕಾದಂಬರಿಯ ತಂತ್ರವನ್ನು ಚಾರಿತ್ರಿಕ ಸಂದರ್ಭವೂಂದರಲ್ಲಿ ನೇರವಾಗಿ ಕಣ್ಣಿಗೆ ಕಾಣದೆ ಇರುವ ಸತ್ಯಗಳನ್ನು ಕಾಣಿಸುವ ಕ್ರಮವಾಗಿ ಬಳಸಿದ್ದಾರೆ.

ಚರಿತ್ರೆಯಲ್ಲಿ ಅಡಗಿರುವ ಸತ್ಯವನ್ನು ತೋರಿಸಲು ಕಾದಂಬರಿ ಎಂಬುದು ಹನೂರರಿಗೊಂದು ನೆಪ. ಈ ತನಕ ನಲವತ್ತಕ್ಕೂ ಹೆಚ್ಚು ಜನಪದ ಮತ್ತಿತರ ಕೃತಿಗಳನ್ನು ರಚಿಸಿರುವ ಅವರಿಗೆ ಚರಿತ್ರೆಯಲ್ಲಿ ಪ್ರದರ್ಶನಗೊಳ್ಳುವ ಚಿತ್ರಗಳಿಗೂ ಜನಜೀವನದ ಸತ್ಯಕ್ಕೂ ಇರುವ ವ್ಯತ್ಯಾಸ ತಿಳಿದಿದೆ. ಸಾಹಿತ್ಯದಲ್ಲಿ ಸಾಮಾನ್ಯ ಜೀವನದ ಸತ್ಯ ಕಾಣುವಂತೆ ಪ್ರತಿಬಿಂಬಿಸಿದ್ದಾರೆ.

ಅಜ್ಞಾತನೊಬ್ಬನ ಆತ್ಮಚರಿತ್ರೆಯಲ್ಲಿ ಕಥನದ ಮೂಲಕ ಹೊಸ ಪ್ರಯೋಗಗಳಿವೆ. ಜಾನಪದದ ಕಥನದಿಂದ ಪ್ರಭಾವಿತರಾದ ಹನೂರರ ಸೃಜನಶೀಲ ಬರಹಗಳಲ್ಲಿ ಕನ್ನಡ ಮಾರ್ಗೀಯ ಮತ್ತು ಜನಪದ ಕಥನ ಪರಂಪರೆಗಳ ಸಾರವಿದೆ. ಮೈಸೂರು ಮತ್ತು ಚಾಮರಾಜನಗರದ ವಿಶಿಷ್ಟ ಆಡುಭಾಷೆಯ ಸೊಗಡಿದೆ. ಪ್ರತಿಯೊಂದು ಪಾತ್ರ ಸನ್ನಿವೇಶಗಳನ್ನು ದೃಶ್ಯಗಳ ಮೂಲಕ ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದೆ.

ಏಕಕಾಲಕ್ಕೆ ಐತಿಹಾಸಿಕವೂ ಜಾನಪದವೂ ಆಗಿ ಕಾಡುವ ಈ ಕಾದಂಬರಿ ಬಹು ಆಯಾಮ ಹೊಂದಿದೆ. ಸಿಂಹಾಸನದ ಇತಿಹಾಸಕ್ಕಿಂತ ಗ್ರಾಮ ಚರಿತ್ರೆಯನ್ನು ಅನಾವರಣಗೊಳಿಸುತ್ತದೆ. ರಾಜಸತ್ತೆಯ ಅರಮನೆಯ ಕೇಂದ್ರಿತ ರಾಜಕಾರಣದಲ್ಲಿ ಅನಾವೃತ್ತವಾಗದೆ ಉಳಿದಿರುವ ವಿವಿಧ ಬಗೆಯ ಸತ್ಯಗಳನ್ನು ಇಲ್ಲಿ ಬೆಳಕಿಗೆ ತರಲಾಗಿದೆ. ಚಾರಿತ್ರಿಕ ವಸ್ತುವನ್ನು ಹೆಕ್ಕಿಕೊಂಡು ಅದನ್ನು ಜನ ಸಾಮಾನ್ಯರ ನೆಲೆಯಿಂದ ತರುವ ಕಲಾತ್ಮಕ ಪ್ರಯತ್ನ ಇಲ್ಲಿದೆ. ಇದನ್ನು ಶುದ್ಧ ಚಾರಿತ್ರಿಕ ಕಾದಂಬರಿ

ಎನ್ನಲಾಗದಿದ್ದರೂ ಶ್ರೀಸಾಮಾನ್ಯನ ನೆಲೆಯಿಂದ ಇತಿಹಾಸ ಅವಲೋಕಿಸುವ ಮರುಚಿಂತನೆ ಗೊಳಪಡಿಸುವ ಪ್ರಯತ್ನ ಇಲ್ಲಿದೆ.

ಒಟ್ಟಾರೆಯಾಗಿ ಕಾದಂಬರಿಯಲ್ಲಿ ತಂತ್ರವನ್ನು ಸಮರ್ಥವಾಗಿ ಬಳಸಿಕೊಂಡಿರುವುದು ಹನೂರರ ಶೈಲಿಯಾಗಿದೆ. ಮೂಲದಲ್ಲಿ ಈ ಕೃತಿ ಒಬ್ಬ ದಳವಾಯಿಯ ಆತ್ಮಚರಿತ್ರೆ, ಆದರೆ ಇದನ್ನು ಕಾದಂಬರಿಯಾಗಿ ರಚಿಸಿರುವುದು ಹನೂರರ ಸೃಜನಶೀಲ ಬರವಣಿಗೆಗೆ ಹಿಡಿದ ಕೈಗನ್ನಡಿಯಾಗಿದೆ. ಇಲ್ಲಿ ಸಿಂಹಾವಲೋಕನ ಕ್ರಮ, ತಂತ್ರಗಾರಿಕೆ, ನಿರೂಪಣಾಶೈಲಿ, ಭಾಷಾ ಪ್ರಯೋಗ ಎಲ್ಲವೂ ಕೂಡ ವಿಶಿಷ್ಟವಾಗಿದ್ದು ಇದೊಂದು ಉತ್ತಮ ಕೃತಿಯಾಗಿ ರೂಪುಗೊಳ್ಳಲು ಕಾರಣವಾಗಿದೆ.

------------

**ಅಡಿಟಿಪ್ಪಣಿ :**

**ಎಚ್.ಎಸ್. ಶಿವಪ್ರಕಾಶ್ ಪ್ರಾಜಾವಾಣಿ ದಿನ ಪತ್ರಿಕೆ, ಪ್ರತಿಸ್ಪಂದನ ೧೫ ನೇ ಫೆಬ್ರವರಿ ೨೦೧೩**

**ಟಿ.ಪಿ ಅಶೋಕ ಸಾಹಿತ್ಯ ಸಂಮೃದ್ಧಿ, ೨೦೧೩, ಪು.ಸಂ.೫೮**

**ಡಾ.ಜಿ.ಎನ್. ಉಪಾಧ್ಯ, ಗಾಂಧಿ ಬಜಾರ್ ಪತಿಕೆ, ಜೂನ್ ೨೦೧೩, ಪು.೧೩**

## ಉಪಸಂಹಾರ

ಅಜ್ಞಾತನೊಬ್ಬನ ಆತ್ಮಚರಿತ್ರೆ ಒಂದು ವಿಭಿನ್ನ, ವಿಶಿಷ್ಟ ಕಾದಂಬರಿ. "ಈ ಕೃತಿಯ ಸ್ವರೂಪ ವಿಸ್ಮಯಗೊಳಿಸುವಷ್ಟು ಹೊಸತಾಗಿದೆ. ಇದು ಇತಿಹಾಸವೂ, ದಂತಕಥೆವೂ, ಜನಪದ ಕಥೆಯೂ ಕಾವ್ಯಕಥನಕವೂ ಆಗಿದೆ" ಎಂಬ ಗಿರೀಶ ಕಾರ್ನಡರ ಹೇಳಿಕೆ ಇದಕ್ಕೆ ಸಾಕ್ಷಿ. ಅರಮನೆಯ ಹಾಗೂ ಅದರ ಪ್ರತಿನಿಧಿಯಾದ ದಳವಾಯಿಯ ಕಥೆ, ಆತ ಇಟ್ಟುಕೊಂಡವಳ-ಕಟ್ಟಿಕೊಂಡವಳ ಕಥೆಯೂ ಹೌದು, ರಾಜಕೀಯ ದಬ್ಬಾಳಿಕೆಗೆ ತುತ್ತಾದ ಜನಸಾಮಾನ್ಯರ ಸಂಕಟದ ಕಥೆಯೂ ಆಗಿದೆ. ಈ ಎಲ್ಲವು ಒಂದರೊಡನೆ ಒಂದು ಹೆಣೆದಿದ್ದರೂ ಎಲ್ಲೂ ಜಟಿಲವಾಗದೆ ಜಾನಪದ ಕಥಾ ನಿರೂಪಣಾ ಶೈಲಿಯ ಸರಳತೆಯಿಂದ ಉತ್ತಮ ಅನುಭವವನ್ನು ಕಟ್ಟಿಕೊಡುತ್ತದೆ. ದೇಶವಾಳುವ ದೊಡ್ಡವರ ನಡುವೆ ಸಿಲುಕಿಕೊಂಡ ಅಜ್ಞಾತನೊಬ್ಬನ ಆತ್ಮಚರಿತ್ರೆಯ ಪಾತ್ರಗಳು ಇತಿಹಾಸವನ್ನು ಜೀವನದ ಒಳಸುಳಿಗಳತ್ತ ತೋರಿಸುವುದನ್ನು ಈ ಅಧ್ಯಾಯದಲ್ಲಿ ವಿಮರ್ಶಾತ್ಮಕವಾಗಿ ಪರಿಶೀಲಿಸಿದೆ.

ಒಟ್ಟಾರೆಯಾಗಿ ಇಡೀ ಕಾದಂಬರಿ ಸಾಮಾನ್ಯ ಪುರುಷನೊಬ್ಬನ ಜೀವನ ಚರಿತ್ರೆಯನ್ನು ಹೇಳುತ್ತಲೇ ಟಿಪ್ಪುಸುಲ್ತಾನನ ಮನಸ್ಥಿತಿ, ಜನಸಾಮಾನ್ಯರ ಬದುಕಿನ ರೀತಿ-ನೀತಿಗಳು ಹಾಗೂ ಅಂದಿನ ಕಾಲದ ಸ್ತ್ರೀಯರ ಮೇಲಿನ ದೌರ್ಜನ್ಯ ಮುಂತಾದವುಗಳ ಚಿತ್ರಣವನ್ನು ಕಟ್ಟಿಕೊಡುತ್ತದೆ. ದಳವಾಯಿಯ ಆತ್ಮ ವೃತ್ತಾಂತವನ್ನು ಚಿತ್ರಿಸುವುದಷ್ಟೆ ಮುಖ್ಯವಾಗದೆ ಆಳವಾದ ಬೌದ್ಧಿಕ ಚಿಂತನೆ, ರಾಜಕೀಯ, ಮನುಷ್ಯ ಸ್ವಭಾವದ ವಿಶ್ಲೇಷಣೆ ಆ ಕಾಲದ ಪರಿಸರ ಸನ್ನಿವೇಶ ನಿರ್ಮಾಣ ಹೀಗೆ ಒಂದೊಂದು ಅಂಶವೂ ಚೇತೋಹಾರಿಯಾಗಿದೆ. ಈ ಕಾದಂಬರಿಯ ಕುತೂಹಲಕಾರಿಯಾದ ಕಥಾನಕ ಮೋಹಕ ಶೈಲಿ ಆತ್ಮಚರಿತ್ರೆಯನ್ನು ದಫ್ತರಿನ ಮೂಲಕ ವರ್ಣನೆಯೊಂದಿಗೆ ಹೇಳಿಸಿರುವ ವಿನೂತನ ತಂತ್ರದಿಂದಾಗಿ ವಿಶಿಷ್ಟವಾಗಿದೆ. ಜೊತೆಗೆ ಕಾದಂಬರಿಯ ಪ್ರಧಾನ ಅಂಶವೆಂದರೆ ಆತ್ಮಾವಲೋಕನ. ಇದು ಕಾದಂಬರಿಯ ಆರಂಭದಿಂದ ಅಂತ್ಯದವರೆಗೂ ಕಂಡುಬರುತ್ತದೆ. ತನ್ನ ತಪ್ಪುಗಳ ಪ್ರಾಯಶ್ಚಿತ್ತಕ್ಕೆ ಆತ್ಮಾವಲೋಕನ ಮಾಡಿಕೊಳ್ಳಲು ದಳವಾಯಿ ಕಥೆಯನ್ನು ಬರೆದಿದ್ದು ಇದು ಎಷ್ಟೋ ಐತಿಹಾಸಿಕ ಅಂಶಗಳನ್ನು ತಿಳಿಯಲು ಸಹಕಾರಿಯಾಯಿತು. ಟಿಪ್ಪುವಿನ ಆತ್ಮಾವಲೋಕನವನ್ನು ಕೂಡ ಇಲ್ಲಿ ಕಾಣುತ್ತೇವೆ. ಇಡೀ ಕಾದಂಬರಿಯಲ್ಲಿ ದಳವಾಯಿ ಆತ್ಮವಿಮರ್ಶೆ ಮಾಡಿಕೊಳ್ಳಲು ಸಂದರ್ಭಗಳು ಪ್ರೇರಣೆ ನೀಡುತ್ತದೆ. ತಾನು ಬರೆದ ಈ ಆತ್ಮ ಚರಿತ್ರೆಯನ್ನು ಯಾರೂ ಓದಬಾರದೆಂದು ರಚಿಸಿದ ಈ ಕಾದಂಬರಿಯು ಎಲ್ಲಾ ಓದುಗ ಸಹೃದಯರನ್ನು ತನ್ನತ್ತ ಸೆಳೆದುಕೊಳ್ಳುತ್ತಾ ಸಾಗುತ್ತದೆ. ತಂತ್ರಗಾರಿಕೆ, ನಿರೂಪಣಾಶೈಲಿ, ಭಾಷಾ ಪ್ರಯೋಗ ಎಲ್ಲವೂ ಕೂಡ ವಿಶಿಷ್ಟವಾಗಿದ್ದು ಇದೊಂದು ಉತ್ತಮ ಕಾದಂಬರಿಯಾಗಿದೆ.

## ಅಧ್ಯಯನದ ಫಲಿತಗಳು

ಕೃಷ್ಣಮೂರ್ತಿ ಹನೂರರು ಸೃಜನಶೀಲ ವ್ಯಕ್ತಿ. ತಮ್ಮ ಸೃಜನಶೀಲತೆಯಿಂದ ಹನೂರರು ಸೃಷ್ಟಿಸಿದ ಹಲವು ಸಾಹಿತ್ಯ ಕೃತಿಗಳಲ್ಲಿ ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯೂ ಒಂದು. ಈ ಕಾದಂಬರಿಯ ಅನೇಕ ಪಾತ್ರಗಳು, ಸನ್ನಿವೇಶಗಳು, ಘಟನೆಗಳನ್ನು ಒಳಗೊಂಡು ರಚನೆಯಾಗಿದ್ದು ವಿಶಿಷ್ಟ ತಂತ್ರಗಾರಿಕೆಯಿಂದ ನಿರೂಪಿಸಲ್ಪಟ್ಟಿದೆ. 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿ ಬಹು ಆಯಾಮದಿಂದ ಕೂಡಿದ ಉತ್ಕೃಷ್ಟ ಕೃತಿಯಾಗಿದ್ದು ಈ ಕಾದಂಬರಿಯನ್ನು ಕುರಿತ ಪ್ರಸಕ್ತ ಅಧ್ಯಯನದಲ್ಲಿ ಕಂಡು ಬಂದ ಫಲಿತಗಳನ್ನು ಈ ಕೆಳಕಂಡಂತೆ ವಿವರಿಸಿಲಾಗಿದೆ.

೧೭೯೯ರಲ್ಲಿ ಟಿಪ್ಪುವಿನ ಆಡಳಿತದಲ್ಲಿ ಸಾಮಾಜಿಕ, ಧಾರ್ಮಿಕ, ರಾಜಕೀಯ, ಆರ್ಥಿಕ ಸ್ಥಿತಿಗತಿಗಳು ಯಾವ ರೀತಿ ಇತ್ತು ಎಂಬುದನ್ನು ಅಜ್ಞಾತನೊಬ್ಬನ ಆತ್ಮಚರಿತ್ರೆ ಕಾದಂಬರಿಯಲ್ಲಿ ಕಟ್ಟಿಕೊಟ್ಟಿದೆ. ಹಾಗೆಯೇ ಹೈದರ್ ಮತ್ತು ಟಿಪ್ಪು ಆಡಳಿತ, ಹೈದರನ ಆಡಳಿತದ ರೀತಿ ನೀತಿಗಳು, ಒನಕೆ ಓಬವ್ವನ ಸಾಹಸ, ಟಿಪ್ಪುವಿನ ಅಸಹಾಯಕತೆ, ಯುದ್ಧದ ಅನಿವಾರ್ಯತೆ, ಜಾತಿ ಸಂಘರ್ಷ ಇಂತಹ ಇನ್ನು ಅನೇಕ ಸಂಗತಿಗಳು ಈ ಕಾದಂಬರಿಯಲ್ಲಿ ನಿರೂಪಿಸಲ್ಪಟ್ಟಿವೆ.

ಇತಿಹಾಸದ ಕತೆಯ ಎಳೆಯನ್ನು ವರ್ತಮಾನದೊಡನೆ ಬೆಸೆದು ಜೀವಂತಿಕೆಯನ್ನು, ಹೊಸತನವನ್ನು ನೀಡುವ ಪ್ರಯತ್ನ ಈ ಕಾದಂಬರಿಯಲ್ಲಿದೆ. ಈ ಹೊತ್ತಿನ ರಾಜಕಾರಣ ಸಮಾಜದ ಸೌಹಾರ್ದತೆಯನ್ನು ಕೆಡೆಸಿ ಬೆಂಕಿಹಚ್ಚುತ್ತಿದ್ದು ಈ ಬಗೆಗೆ ನಾವು ಜಾಗರೂಕರಾಗಿರಬೇಕಾದ ಆಶಯ ಕಾದಂಬರಿಯಲ್ಲಿ ತಿಳಿದುಬರುತ್ತದೆ.

ಇತಿಹಾಸದ ಕಾಲಗರ್ಭದಲ್ಲಿ ಅಡಗಿ ಹೋದ ಅಜ್ಞಾತ ಸಂಗತಿಗಳನ್ನು ಪುನರ್ ಪರಿಶೀಲಿಸುವ ಪ್ರಯತ್ನ ಈ ಕಾದಂಬರಿಯಲ್ಲಿದೆ. ನಮ್ಮ ಅರಿವನ್ನು ವಿಸ್ತರಿಸುವ ಶಕ್ತಿ ಈ ಕಾದಂಬರಿಯಲ್ಲಿದೆ. ಹನೂರರು ಕೇವಲ ಕಥೆಗಾಗಿ ಇತಿಹಾಸವನ್ನು ಅವಲಂಬಿಸಿಲ್ಲ ಜೀವನದ ವಾಸ್ತವಿಕ ಕಟು ಸತ್ಯವನ್ನು ತೋರಿಸುವುದು ಅವರ ಪ್ರಮುಖ ಉದ್ದೇಶವಾಗಿದೆ.

ಕುಂಪಣಿ ಸರಕಾರದ ವಸಹಾತುಶಾಹಿ ರಾಜಕಾರಣದ ಪ್ರಸ್ತಾಪವನ್ನು ಕಾದಂಬರಿ ಪರೋಕ್ಷವಾಗಿ ಮಾಡುತ್ತದೆ. ಅದರ ವಿರುದ್ಧ ಟಿಪ್ಪುವಿನ ಹೋರಾಟ, ಅವನ ಸೋಲು ತನ್ನವರಿಂದಲೆ ಅವನು ಅನುಭವಿಸುವ ವಿಶ್ವಾಸ ದ್ರೋಹ ಅವನ ಹತಾಶೆ ದುರಂತಗಳು ಕಾದಂಬರಿಯಲ್ಲಿ ವ್ಯಕ್ತವಾಗಿದೆ.

ಇತಿಹಾಸವೆಂದರೆ ಬರೆದ, ಬರೆಯಲ್ಪಟ್ಟ ಪುಟಗಳು ಮಾತ್ರವಲ್ಲ. ಬರೆಯದ ಬರೆಯಲಾಗದ ಸಂಪುಟಗಳನ್ನು ಒಡಲಲ್ಲಿ ಇಟ್ಟುಕೊಂಡ ಅಜ್ಞಾತ ಕಾಲಗರ್ಭದಲ್ಲಡಗಿದ್ದೂ ಆಗಿದೆ. ಒಬ್ಬ

ದಳವಾಯಿಯ ಮೂಲಕ ಐತಿಹಾಸಿಕ ಘಟನೆಗಳನ್ನು ವ್ಯಾಖ್ಯಾನಿಸುವ ವಿನೂತನ ತಂತ್ರವನ್ನು ಹನೂರರು ಯಶಸ್ವಿಯಾಗಿ ಬಳಸಿಕೊಂಡಿದ್ದಾರೆ.

ಕಥೆಯ ಬಹುಪಾಲು ತಂತ್ರದೊಡನೆ ಪ್ರಸ್ತುತದ ಘಟನೆಗಳಿಗೆ ತಳುಕುಹಾಕಿಕೊಂಡು ಸಾಗುತ್ತದೆ. ಈ ಮೂಲಕವಾಗಿ ತನ್ನೊಳಗೆ ಆತ್ಮವಿಮರ್ಶೆಯನ್ನು ಮಾಡಿಕೊಳ್ಳಲು ದಳವಾಯಿಗೆ ಹೇರಳವಾದ ಅವಕಾಶಗಳು ಲಭ್ಯವಾಗಿವೆ.

ಎಲ್ಲವೂ ತಾನೇ ಎಂದು ಮೆರೆದು ಲೋಕ ನಡುಗಿಸಲು ಹೋದ ಟಿಪ್ಪು ಮತ್ತು ಅವನ ದಳವಾಯಿ ಇಬ್ಬರೂ ಅಸಹಾಯಕರಾಗಿ ನಿಲ್ಲುವ ಪರಿಸ್ಥಿತಿಯ ಕೈಗೊಂಬೆಗಳಾಗುತ್ತಾರೆ. ಕುವೆಂಪು ಹೇಳಿದಂತೆ ಇಲ್ಲಿ ಯಾರು ಮುಖ್ಯರಲ್ಲ, ಯಾರೂ ಅಮುಖ್ಯರಲ್ಲ, ಎಂಬ ದಾರ್ಶನಿಕ ನುಡಿ ಇಲ್ಲಿ ಸತ್ಯವಾಗಿದೆ. ಇತಿಹಾಸ ಏನೇ ಚಿತ್ರಿಸಲಿ, ಜನಪದರು ಏನೇ ಹೇಳಲಿ, ನಾಯಕ ಇಲ್ಲವೆ ಖಳನಾಯಕನಾಗಿ ಟಿಪ್ಪು ಜನಮಾನಸದಲ್ಲಿ ಉಳಿದಿರಲಿ ತನ್ನ ಇಬ್ಬರೂ ಮಕ್ಕಳನ್ನು ಬ್ರಿಟಿಷರಿಗೆ ಪತ್ತೆ ಇಡುವ ಸಂದರ್ಭಕ್ಕೆ ಸಿಲುಕಿದ್ದು ಶೋಚನೀಯ ಸಂಗತಿಯಾಗಿದೆ.

ಕಾದಂಬರಿಯಲ್ಲಿ ಜಾನಪದೀಯ ಸಂಗತಿಗಳು ಹೇರಳವಾಗಿದೆ. ಜಾನಪದ ತಜ್ಞರಾದ ಹನೂರರು ಕಾದಂಬರಿಯಲ್ಲಿ ಅವಕಾಶ ಸಿಕ್ಕಿದಲ್ಲೆಲ್ಲ ಜನಪದರ ಬದುಕು-ಬವಣೆ ಜನಪದರ ವಿಶಿಷ್ಟ ಜೀವನ ಕ್ರಮ ಜಾನಪದ ಕಲೆ ಮುಂತಾದವುಗಳ ಮೇಲೆ ಬೆಳಕು ಚೆಲ್ಲಿದ್ದಾರೆ. ಹೀಗಾಗಿ ಪ್ರಸ್ತುತ ಕಾದಂಬರಿಯನ್ನು ಜಾನಪದೀಯ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಅವಕಾಶವಿದೆ.

ಕಾದಂಬರಿಯಲ್ಲಿ ಬಳಕೆಯಾಗಿರುವ ಭಾಷೆ ವಿಶೇಷತೆಯಿಂದ ಕೂಡಿದೆ. ಮೈಸೂರು, ಶ್ರೀರಂಗಪಟ್ಟಣ ಮತ್ತು ಕೊಳ್ಳೇಗಾಲದ ಗ್ರಾಮ್ಯ ಭಾಷೆಯನ್ನು ಕಾದಂಬರಿಯಲ್ಲಿ ಹನೂರರು ಬಳಸಿಕೊಂಡಿದ್ದಾರೆ. ಇದು ಕಾದಂಬರಿಗೊಂದು ಹೊಸ ಮೆರಗು ನೀಡಿದೆ. ಆದ್ದರಿಂದ ಪ್ರಸ್ತುತ ಕಾದಂಬರಿಯನ್ನು ಭಾಷಿಕ ಹಿನ್ನೆಲೆಯಲ್ಲಿ ಅಧ್ಯಯನ ಮಾಡಲು ಅವಕಾಶವಿದೆ.

ಇಡೀ ಕಾದಂಬರಿಯನ್ನು ಆವರಿಸಿರುವ ವಸ್ತುವೆಂದರೆ ಯುದ್ಧದ ಪರಿಕಲ್ಪನೆ ಅದು ಬೇಕೆ ಅಥವಾ ಬೇಡವೇ ಎಂಬ ಚರ್ಚೆ ಇಲ್ಲಿ ಬಾರದಿದ್ದರೂ ಕಾದಂಬರಿಯುದ್ದಕ್ಕೂ ಕಂಡು ಬರುವ ಯುದ್ಧದ ಭೀಕರತೆ ಯುದ್ಧದ ಬಗೆಗೆ ಜಿಗುಪ್ಸೆ ಮೂಡಿಸುತ್ತದೆ. ದಳವಾಯಿ ಆತ್ಮಚರಿತ್ರೆಯ ಮೂಲಕ ಯುದ್ದದ ಪುರುಷಾರ್ಥವನ್ನು ಕಾದಂಬರಿಕಾರರು ಖಂಡಿಸುತ್ತಾರೆ. ಈ ನಿಟ್ಟಿನಲ್ಲಿ ಹೆಚ್ಚಿನ ಸಂಶೋಧನೆಗೆ ಕಾದಂಬರಿಯಲ್ಲಿ ಅವಕಾಶವಿದೆ.

ಕನ್ನಡ ಸಾಹಿತ್ಯದಲ್ಲಿ ಆತ್ಮಚರಿತ್ರೆಯ ಮೂಲಕ ಚಾರಿತ್ರಿಕ ಸಂಗತಿಯನ್ನು ಕಾದಂಬರಿಯ ವಸ್ತುವಾಗಿಸಿಕೊಂಡು ಬಂದಿರುವ ಕಾದಂಬರಿಗಳು ಅನೇಕ. ಈ ನಿಟ್ಟಿನಲ್ಲಿ ಅಂತಹ ಕಾದಂಬರಿಗಳೊಂದಿಗೆ ಸಮೀಕರಿಸಿ ತೌಲನಿಕವಾಗಿ ಅಧ್ಯಯನ ಮಾಡಲು ಸಾಧ್ಯವಿದೆ.

## ಅನುಬಂಧ –೧

### 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ಬರುವ ವಿಶಿಷ್ಟ ಪದಗಳ ಪಟ್ಟಿ

| | |
|---|---|
| ಅಂಡಲೆ–ಅಲೆದಾಡು | ಅಗುಣಿ–ಚಿಲಕ |
| ಅಮುಕಿ–ಒತ್ತಿ, ಹಿಸುಕಿ | ಅರಸಾಳಿಕೆ–ಅರಸರ ಕಡೆಯವರು |
| ಅರಿವೆ–ಬಟ್ಟೆ | ಅರಿವಾಣ–ತಟ್ಟೆ |
| ಅಸ್ತಿಭಾರ–ತಳಹದಿ, ಬುನಾದಿ | ಆಮ್ರ–ಸಾರು,ಹುಳಿ |
| ಆವು–ಹಸು | ಇನಾಮು–ಭತ್ಯೆ |
| ಒಳಪಾಸಲೆ–ಒಳಾಂಗಣ | ಕಚ್ಚೆಪಾವುಡೆ–ಲುಂಗಿ, ಬಟ್ಟೆ |
| ಕಟಿಸೂತ್ರ–ಡಾಬು, ಉಡಿದಾರ | ಕಣ–ದಾನ್ಯ ಒಕ್ಕಣೆ ಮಾಡುವ ಸ್ಥಳ |
| ಕನ್ನಗತ್ತರಿ–ಗೋಡೆಕೊರೆಯುವ ಸಾಧನ | ಕಾರುಬಾರಿ–ಆಡಳಿತ |
| ಕುಂಪಣಿ–ಬ್ರಿಟಿಷ್ ಈಸ್ಟ್ ಇಂಡಿಯಾ ಕಂಪಣಿ | ಕೂಡಿಕೆ–ಕೂಡಾವಳಿ, ಮರುಮದುವೆ |
| ಕೆಳೆ–ಗೆಳೆತನ, ಸ್ನೇಹ | ಕೇಮೆ–ಕೆಲಸ |
| ಕೋಲುಗಳ್ಳಿ–ಒಂದು ಬಗೆಯ ಕಳ್ಳಿಗಿಡ | ಕೋರಣ್ಯ–ಭಿಕ್ಷೆ |
| ಕೋರಿ–ವಯಸ್ಸಿಗೆ ಬಂದ ಹೆಣ್ಣುಮಗಳು | ಖಬರು–ಎಚ್ಚರ, ಅರಿವು |
| ಖಾಲೀಫ–ಇಸ್ಲಾಂ ಧರ್ಮಗುರು, ದೊರೆ | ಖಾವಂದ್–ಒಡೆಯ, ಸ್ವಾಮಿ |
| ಗುಕ್ಕು–ತುತ್ತು | ಗೆಣೆತನ–ಸಹವಾಸ |
| ಗ್ರಾಮಸಿಂಹ–ನಾಯಿ | ಚುರುಪು–ದೇವರಪ್ರಸಾದ |
| ಚಲನ–ಅಲುಗಾಟ,ಸಂಚಾರ | ಚುಟುಕ–ಚಿಕ್ಕ |
| ಜಡ್ಡು–ರೋಗ, ಕಾಯಿಲೆ | ಜಾಪತ್ತು–ಆಪತ್ತು |
| ಜುಲುಮೆ–ಸುಂಕ | ತಂಬೂರಿ–ತಂಬೂರಿ |

ತಲಾಷು–ಹುಡುಕು

ತರುಬು–ತಡೆ, ನಿಲ್ಲಿಸು

ತಹಲ್–ಇದುವರೆಗೆ

ತಾಪೇದಾರಿ–ಕೆಲಸ,ಸೇವೆ

ತಾಳದ–ಒಂದು ಬಗೆಯ ಕಾಯಿಪಲ್ಯ

ದಂಡೆಪಂಡೆ–ಅಕ್ಕಪಕ್ಕ

ದಪ್ತರು–ದಾಖಲೆ ಪುಸ್ತಕ

ದಮಡಿ–ಚರ್ಮ ವಾದ್ಯ

ದವಲತ್ತು–ಕೊಬ್ಬು,ಅಹಂಕಾರ

ದಾರವಂದ–ಬಾಗಿಲು

ದಿವಾನಖಾನೆ–ಹಜಾರ, ಸಭಾಗೃಹ

ದೇಸಪ್ಪ –ದಾಸಯ್ಯ

ದೊಣೆ–ಸಣ್ಣ ತೊರೆ

ನೆಣಗೊಬ್ಬು–ಸೊಕ್ಕು

ನೆಪ್ಪು–ನೆನಪು

ಪರಂಗಿಯವರು–ಬ್ರಿಟಿಷರು

ಪಾಗು–ಮುಂಡಾಸು, ರುಮಾಲು

ಪಾಪಸುಕಳ್ಳಿ–ಒಂದು ಬಗೆಯ ಕಳ್ಳಿಗಿಡ

ಪಿತ್ಥ–ಹುಚ್ಚು, ಕೋಪ

ಪಿಳ್ಳೆ– ಸಣ್ಣದು, ಸಣ್ಣಹುಡುಗ

ಪೈಕ–ವರ್ಗ, ಗುಂಪು

ಪೆಣ್ಬುಯ್ಯಲ–ಹೆಣ್ಣನ್ನುಅಪಹರಿಸುವವನು

ಪರ್ಸಂಗ–ಕಥೆ

ಫಾಸಲೆ–ಪಡಶಾಲೆ

ಬರಗ–ಹುಲಿ

ಬಾವುಣಿಕೆ–ಹೊಂದಾಣಿಕೆ,ಹೋಲಿಕೆ

ಬೈಗು–ಸಾಯಂಕಾಲ, ಬೆಳಗು

ಬೊಬ್ಬಿರಿ–ಚೀರು

ಮಕ್ಕಾ–ಮೆಕ್ಕಾ, ಮುಸ್ಲಿಮರ ಪವಿತ್ರಸ್ಥಳ

ಮರಸು–ಅಡಗುತಾಣ

ಮುಂಡಾಸು–ರುಮಾಲು

ಮುಂಡುಗಳ್ಳಿ–ಒಂದು ಬಗೆಯ ಕಳ್ಳಿ

ಮುಸುಡಿ–ಮುಖ

ಮೊಗರು–ಎಳೆಯಕಾಯಿ, ಮಿಡಿ

ಮೊಕ್ಕಾಮು–ಬೀಡು, ತಂಗುವಸ್ಥಳ

ಮೋಖಾಬಿಲೆ–ಎದುರು, ಸಮ್ಮುಖ

ರಚ್ಚು–ಹಟ, ಸೇಡು

ರವಷ್ಟು–ಸ್ವಲ್ಪ

ಲಡಾಯಿ–ಯುದ್ಧ,ಕಾಳಗ

ವಢಬಾಳು– ಸಂಕಷ್ಟ ಜೀವನ

ವಪ್ಪಾರೆ–ಗುಡಿಸಲು

ಶಂಕೆ–ಅನುಮಾನ

ಶಿವಾಯಿ–ಹೊರತು

ಸತ್ತೆಹೊತ್ತೆ–ಪೊದೆ

ಸ್ವಾಮಾರ–ಸೋಮವಾರ

ಹರಿಕಾರ–ಸಂದೇಶವಾಹಕ

ಹಸೀಬೆಚೀಲ–ಹೆಗಲಿಗೆ ಹಾಕಿಕೊಳ್ಳುವ ಚೀಲ

ಹುಣ್ಣು–ಗಾಯ

ಚೌಳುಮಣ್ಣು–ಉಪ್ಪಿನಮಣ್ಣು

ಫೌಜುದಾರ–ಸೈನ್ಯದ ನಾಯಕ

ಓಜಯ್ಯ–ಮರಗೆಲಸದವ

ಐಲಾಟ–ಹುಚ್ಚಾಟ

ಹಿಸುಣ–ಚಾಡಿಕೋರ

ಸಟ್ಟಂ– ಮಧ್ಯೆ

ಯಕ್ಕತ್ತು–ಕತ್ತಿನ ಹಿಂಭಾಗ

ಪಲ್ಲಂಗ–ಮಂಚ

ವಡಬಾಳು–ಸಂಕಷ್ಟ

ಬೆಮೆ–ಭ್ರಮೆ,ಭ್ರಾಂತಿ

ಲಗತ್ತು–ಹೊಂದಿಕೆ

ಸಂಕಲೆ–ಬಂಧನ

ಹಳಿ–ದೂಷಿಸು

ಪ್ರಸನ್ನ–ಸಂತುಷ್ಟವಾದ

ಶುಕ್ರಾರ–ಶುಕ್ರವಾರ

ಸೊಪ್ಪುಹಾಕು–ಬೆಲೆಕೊಡು, ಲಕ್ಷ್ಯಕೊಡು

ಹಕೀಮ–ಯುನಾನಿ ವೈದ್ಯ

ಹಲಾಲ್ಖೋರ–ಮೋಸಗಾರ

ಹಿಣಿಲು–ನವಿಲಿನಗರಿ

ಹೆಂಟೆ– ಮಣ್ಣು, ಬೆಲ್ಲದ ಮುದ್ದೆ

ಹೇಷಾರವ–ಕುದುರೆಯ ಕೆನೆತ

ಹಜಾರ–ಒಳಾಂಗಣ

ಹೆಳವ–ಕುಂಟ

ನಸೀಬು–ಅದೃಷ್ಟ

ಸುಮಾನ–ವಿನೋದ

ಮೊನೆಗಾರ–ಮುಂದಾಳು

ಮುಕ್ಕು–ತುಂಡಾಗು

ಬಸವಿ–ದೇವದಾಸಿ, ಜಾರೆ

ಕಲಾಯಿ–ಕಡಾಯಿ

ಬೇಗೆ–ಸಂಕಟ

ಲಂಬು–ಎತ್ತರವಾದ ವ್ಯಕ್ತಿ

ಸಂದು–ಮೂಲೆ

ಹುಲು–ಅಲ್ಪವಾದುದು

ಬಿದಿ–ಅದೃಷ್ಟ

## ಅನುಬಂಧ- ೨

## ಪ್ರಶ್ನಾವಳಿ

೧) 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿ ರಚನೆಗೆ ಪ್ರೇರಣೆ ಯಾವುದು?

೨) 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ಅಜ್ಞಾತ ಯಾರು ? ಈ ಕಾದಂಬರಿಗೆ ಈ ಹೆಸರು ಇಡಲು ಕಾರಣವೇನು?

೩) ಕಾದಂಬರಿಯಲ್ಲಿ ಬರುವ ಸನ್ನಿವೇಶಗಳು ನೈಜ ಘಟನೆಯನ್ನು ಆಧರಿಸಿದೆಯೇ?

೪) 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ಜಾನಪದೀಯ ಅಂಶಗಳಿಗೆ ಯಾವ ಪ್ರಾಂತ್ಯದ ಜಾನಪದ ವೈಶಿಷ್ಟ್ಯತೆಗಳನ್ನು ಬಳಸಿಕೊಂಡಿದ್ದೀರೀ?

೫) ಕಾದಂಬರಿಯಲ್ಲಿ ಬರುವ ಸ್ತ್ರೀಪಾತ್ರಗಳ ಮೂಲಕ ಮಹಿಳೆಯರಿಗೆ ನಿಮ್ಮ ಸಂದೇಶವೇನು ?

೬) 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿ ಬೇರೆ ಕಾಂಬರಿಗಳ ಮೇಲೆ ಪ್ರಭಾವಬೀರಿದೆಯೇ?

೭) 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ಕಥಾವಸ್ತುವನ್ನಾಗಿ ಚಾರಿತ್ರಿಕ ವಸ್ತುವನ್ನು ಆಯ್ಕೆ ಮಾಡಿರುವುದರ ಹಿನ್ನೆಲೆ ಏನು?

೮) 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯಲ್ಲಿ ದಳವಾಯಿಯಂತಹ ಸಾಮಾನ್ಯ ವ್ಯಕ್ತಿಯನ್ನು ಕುರಿತು ಕೃತಿ ರಚಿಸಲು ಕಾರಣವೇನು?

೯) ಈ ಕಾದಂಬರಿಯಲ್ಲಿ ಬರುವ ಯಾವೂದೇ ಪಾತ್ರಗಳಿಗೂ ಹೆಸರುಗಳನ್ನು ನೀಡದಿರಲು ಕಾರಣವೇನು?

೧೦) ಹೈದರಾಲಿ ಮತ್ತು ಮತ್ತು ಟಿಪ್ಪುವಿನ ಚರಿತ್ರೆಯನ್ನು ನೀವು ವಿಶಿಷ್ಟವಾಗಿ ಬಳಸಿರಲು ಕಾರಣವೇನು?

೧೧. 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಯ ಸ್ತ್ರೀಪಾತ್ರಗಳ ಬಗ್ಗೆ ನಿಮ್ಮ ನಿಲುವು ಏನು ?

೧೨. ಈ ಕಾದಂಬರಿಯ ಮೂಲಕ ಸಮಾಜಕ್ಕೆ ನಿಮ್ಮ ಸಂದೇಶವೇನು?

೧೩. 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿಗೆ ಪ್ರಶಸ್ತಿ ಪುರಸ್ಕಾರಗಳು ಬಂದಿದೆಯೇ? ಅಥವ ನಿರೀಕ್ಷಿಸುತ್ತೀರಾ?

೧೪. 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿ ವಿಮರ್ಶಕರ ಮೆಚ್ಚಿಗೆಯನ್ನು ಪಡೆದ ಕೃತಿಯಾಗಿದೆ ಇದಕ್ಕೆ ಇಮ್ಮ ಅಭಿಪ್ರಾಯವೇನು?

೧೫. ಜಾನಪದ ವಿದ್ವಾಸರಾದ ನೀವು ಈ ಕೃತಿಯಲ್ಲಿ ಜಾನಪದ ಸಿರಿಯನ್ನು ಅನಾವರಣ ಗೊಳಿಸಿದ್ದೀರಾ? ಜನಪದರ ಬದುಕನ್ನು ಕಟ್ಟಿಕೊಟ್ಟಿದ್ದೀರಾ ?

೧೬. ಈ ಕೃತಿಯ ರಚನೆಗೆ ನೀವು ಬಳಸಿರುವ ಶೈಲಿ ಮತ್ತು ತಂತ್ರ ಯಾವುದು?

೧೭. ಈ ಕಾದಂಬರಿಯ ಕಥಾ ನಿರೂಪಣಾ ತಂತ್ರವಾಗಿ ಆತ್ಮಕಥೆಯನ್ನು ಬಳಸಿರಲು ಕಾರಣವೇನು?

೧೮. 'ಅಜ್ಞಾತನೊಬ್ಬನ ಆತ್ಮಚರಿತ್ರೆ' ಕಾದಂಬರಿ ರಚಿಸುವಾಗ ಬೇರೆ ಯಾವುದಾದರೂ ಕೃತಿಗಳ ಪ್ರಭಾವ ಆಗಿದೆಯೇ ?

೧೯. ಈ ಕಾದಂಬರಿಯಲ್ಲಿ ನೀವು ಹೇಳದೆ ಉಳಿದಿರುವ ಸಂಗತಿಗಳೇನಾದರೂ ಇದೇಯೇ?

೨೦. ಈ ಕಾದಂಬರಿಯನ್ನು ಸಮಾಜ ಸ್ವೀಕರಿಸಿದೆಯೇ ? ಈ ಕಾದಂಬರಿ ಮೂಲಕ ಸಮಾಜಕ್ಕೆ ನೀವು ನೀಡಿರುವ ಸಂದೇಶ ಏನು ?

## ಅನುಬಂಧ –೩

## ಕಾದಂಬರಿಯಲ್ಲಿ ಬಳಸಿರುವ ಜಾನಪದ ಕಥನ ಗೀತೆಗಳು – (ಅ)

ಓಂ ನಮಃ ಶಿವಾಯ ಪಾರ್ವತಿ ಪತಿಯೇ ನಮಃ

ಶಿವಾ ಶಿವಾ ತೋಡೆಯಲ್ಲಿ ಪಾರ್ವತಿದೇವಿ

ಜಡೆಯಲ್ಲಿ ಗಂಗಾಮಾತೆ

ಸಡಗರದಲ್ಲಿರುವ ನಂದಿ ವಾಹನನೆ

ಮುಪ್ಪಾದವರಿಗೆ ಹಿಡಿಯನ್ನು ಕರುಣಿಸು

ಹಣ್ಣಾದವರಿಗೆ ಹಾಲು ಅನ್ನವ ಕಾಣಿಸು

ಮಕ್ಕಳಿಲ್ಲದವರಿಗೆ ಶಿಶುಗಳ ಕರುಣಿಸು

ಒಕ್ಕಲು ಮಕ್ಕಳಿಗೆ ಮಳೆಯ ಕರುಣಿಸು

ಲೋಕಕ್ಕೆ ಘನಸಂಪತ್ತು ಕೊಡುವ ಪರಮೇಶ್ವರನೆ...

ಅಹಹಾ ದೇವ ಅಹಹಾ ರುದ್ರ

ಬೂದಿ ಮುಚ್ಚಿದ ಕೆಂಡ ಮೂರುಲೋಕದ ಪ್ರಚಂಡ

ಮಂಡೆ ಕೆದರಿ ನಾಂಟ್ಯವಾಡಿದನಂತೆ

ಆಕಾಸಕೆ ಒಂದು ಕಾಲು ಭೂಮಿಗೆ ಒಂದು ಕಾಲು

ನೆಲವಿಲ್ಲದೇ ನಾಂಟ್ಯವಾಡಿದ

ಆರು ಖಂಡುಗ ಬಂಡಾರವನ್ನ

ಅಡ್ಡಬಡ್ಡ ಧರಿಸಿ ಮಾಯಾದ ಕುದುರೆಯನ್ನೆರಿ

ಸಪ್ತ ನದಿಗಳ ದಾಟಿ

ಮಣಿ ಮಲ್ಲಾಸರನಲ್ಲದೆ ಸಕಲ ದುಷ್ಟರನು ಸಂಹಾರ ಮಾಡಿ

ಕೋಟಿಕೋಟಿ ರಾಕ್ಷಸರ ನೆಲಸಮ ಗೈದವನ ನೋಡಿರೇ

ಅಹಹಾ ರುದ್ರ ಅಹಹಾ ಮಹದೇವ

ದೇವನೆ ನಿನ್ನ ನಂಬಿದವರಿಗೆ ಭಯವುಂಟೆ
ನರನಾಟ ಎಲ್ಲಿಗಂಟ
ಶಿವಶಿವ ನಿನ್ನ ಗೆದ್ದವರುಂಟೆ
ಕಾಲನ ಹಿಡಿದವರುಂಟೆ ದಾಟಿದವರುಂಟೆ...

### ಜಾನಪದ ಕಥನ ಗೀತೆ (೮)

ಕಂಚುನಂಗೆ ಹೊಳೆವ ಹೆಣ್ಣೆ
ಹೊರಳಿ ನೋಡೆ ಕಣ್ಣು ತೆರೆದು
ಕುತುನಿ ಚೆಂಡು ತೆರೆದು ತೋರೆ
ರತ್ನದಂಥ ಪುರುಷ ನಾನು...
ಕಣ್ಣು ನೋಡಿಕಪ್ಪು ತಂದೆ
ಬೆನ್ನು ನೋಡಿ ಕುಪ್ಸ ತಂದೆ
ನೀರು ಗಂಧ ಬಟ್ಟನಿಟ್ಟು
ಬಾರೆ ನೀ ಸನಿಹ ಸುಂದರಿ...
ಕಡಗ ಕೊಡಿಸುವೆನೆಂದು ಮೂಳ
ಕಾಡಿ ಕರೆದು ತಂದೆಯಲ್ಲೊ
ಕಡಗವಲ್ಲಿ ಎಂದರೀಗ
ಗಿಡುಗನಂಗೆರಗುವೆಯಲ್ಲೋ...
ಅತ್ತೆಯೆಂಬೋಳಿಗೆ ಹರಕು ಚಾಪೆ
ಮಾವನೆಂಬೋನಿಗೆ ಮುರಿದ ಮಂಚ
ತಾಳಿ ಕಟ್ಟಿದ ಗಂಡ ಎತ್ತ ಹೋದನೋ
ನಾನು ಮಾತ್ರ ಮೂರು ಹಡೆದನೇ...

ಗಂಡ ದಂಡಿಗೋಗುವಾಗ

ಬೀಗ ಜಡಿದು ಹೋದನಲ್ಲ

ಜಡಿದ ಬೀಗ ಒಡೆದುಬಿದ್ದು

ಮೂರುಮಕ್ಕಳ ಹಡೆದೆನೇ...

ಓಣಿ ಓಣಿ ತಿರುಗಿದಂಥ ಧೀರ

ಗೋಣಿ ರೋಗ ತುಂಬಿಕೊಂಡು

ಮದ್ದು ಯಾರು ಕೊಡತಾರಂತ

ಬಿದ್ದವನಲ್ಲೊ ಮಣ್ಣ ಮ್ಯಾಲೆ... (ಪು.೧೯೦)

## ಪರಾಮರ್ಶನ ಗ್ರಂಥಗಳು


| | | |
|---|---|---|
| ಅಶೋಕ ಟಿ. ಪಿ | ೨೦೧೩ | ಸಾಹಿತ್ಯ ಸಮೃದ್ಧಿ<br>ಅಂಕಿತ ಪುಸ್ತಕ ೫೩, ಶ್ಯಾಮ್ ಸಿಂಗ್‌ಕಾಂಪ್ಲೆಕ್ಸ್<br>ಗಾಂಧಿ ಬಜಾರ್ ಮುಖ್ಯ ರಸ್ತೆ, ಬಸವನ ಗುಡಿ<br>ಬೆಂಗಳೂರು ೦೪. |
| ಕೃಷ್ಣಮೂರ್ತಿ ಹನೂರು | ೨೦೧೨ | ಅಜ್ಞಾತನೊಬ್ಬನ ಆತ್ಮಚರಿತ್ರೆ,<br>ಅಂಕಿತ ಪುಸ್ತಕ, ಗಾಂಧಿಬಜಾರ್ ಮುಖ್ಯರಸ್ತೆ<br>ಬಸವನಗುಡಿ, ಬೆಂಗಳೂರು-೦೪. |
| ಬರಗೂರು ರಾಮಚಂದ್ರಪ್ಪ (ಪ್ರಸಂ) | ೧೯೯೩ | ಕನ್ನಡ ಸಾಹಿತ್ಯದಲ್ಲಿ ಸ್ತ್ರೀಸಂವೇದನೆಯ ಸ್ವರೂಪ,<br>ಕರ್ನಾಟಕ ಸಾಹಿತ್ಯ ಆಕಾಡೆಮಿ,<br>ಕನ್ನಡ ಭವನ, ಜೆ.ಸಿ. ರಸ್ತೆ, ಬೆಂಗಳೂರು. |
| ಮದನಕುಮಾರ.ಎ.ಆರ್ | ೨೦೧೧ | ನದಿಯಾದ ನೀರ ಬಿಂದು<br>ಚಂದ್ರಿಕ ಪ್ರಿಂಟರ್ಸ್ ಅಂಡ್ ಪಬ್ಲಿಷರ್ಸ್,<br>ಮೈಸೂರು. |
| ರಾಜಪ್ಪ ದಳವಾಯಿ (ಸಂ) | ೧೯೯೬ | ಕನ್ನಡ ಸಾಹಿತ್ಯ ಕೋಶ<br>ದಳವಾಯಿ ಪ್ರಕಾಶನ, ಬೆಂಗಳೂರು-೫೬. |
| ರಾಮಚಂದ್ರನ್. ಸಿ.ಎನ್ | ೨೦೧೩ | ಸಾಹಿತ್ಯ ವಿಮರ್ಶೆ<br>ಅಂಕಿತ ಪುಸ್ತಕ ೫೩, ಶ್ಯಾಮ್‌ಸಿಂಗ್ ಕಾಂಪ್ಲೆಕ್ಸ್,<br>ಗಾಂಧಿಬಜಾರ್ ಮುಖ್ಯರಸ್ತೆ, ಬಸವನ ಗುಡಿ,<br>ಬೆಂಗಳೂರು ೦೪. |
| ಶಿಸೂರ ಬಿವಿ | ೨೦೦೮ | ಸಂಶೋಧನಾ ಸ್ವರೂಪ<br>ಅನ್ನಪೂರ್ಣ ಪ್ರಕಾಶನ, ಹುಬ್ಬಳ್ಳಿ. |
| ಸಂಗಮೇಶ ಸವದತ್ತಿಮಠ | ೨೦೦೩ | ಕನ್ನಡ ಸಾಹಿತ್ಯ ಸಂಶೋಧನೆಯ ಇತಿಹಾಸ<br>ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು. |
| ಸಂಗಮೇಶ ಸವದತ್ತಿಮಠ | ೨೦೧೦ | ಕನ್ನಡ ಸಾಹಿತ್ಯ ಸಂಶೋಧನೆ ಮಾರ್ಗ ಮತ್ತು<br>ಇತಿಹಾಸ, ರೂಪಶ್ರೀ ಪ್ರಕಾಶನ, ಧಾರವಾಡ. |

ಶ್ರೀಕಂಠ ಕೂಡಗಿ (ಸಂ) ೨೦೧೦ ಆಧುನಿಕತೆ ಮತ್ತು ಕನ್ನಡ ಕಾದಂಬರಿ,
ಶಿವಕುಮಾರಸ್ವಾಮಿ. ಸಿ.ಎಸ್ ಪ್ರಸಾರಾಂಗ, ಕುವೆಂಪು ವಿಶ್ವವಿದ್ಯಾನಿಲಯ
ಜ್ಞಾನಸಹ್ಯಾದ್ರಿ, ಶಂಕರಘಟ್ಟ

ನಾಗಭೂಷಣಸ್ವಾಮಿ ಓ. ಎಲ್ ೨೦೧೧ ವಿಮರ್ಶೆಯ ಪರಿಭಾಷೆ,
ಅಂಕಿತ ಪುಸ್ತಕ ೫೩,
ಶ್ಯಾಮ್ ಸಿಂಗ್ ಕಾಂಪ್ಲೆಕ್ಸ್
ಗಾಂಧಿಬಜಾರ್ ಮುಖ್ಯರಸ್ತೆ, ಬಸವನಗುಡಿ,
ಬೆಂಗಳೂರು ೦೪.

**ನಿಘಂಟುಗಳು**

- ಕನ್ನಡ-ಕನ್ನಡ ಇಂಗ್ಲೀಷ್ ಶಬ್ದಕೋಶ
- ಕನ್ನಡ ರತ್ನಕೋಶ
- ಸಂಕ್ಷಿಪ್ತ ಕನ್ನಡ ನಿಂಘಟು
- ಸಿರಿಗನ್ನಡ ಅರ್ಥಕೋಶ

**ಪತ್ರಿಕೆಗಳು**

- 'ಸರ್ವಗ್ರಾಹಿ ಕತೆಗಾರನ ವಿಸ್ಮಯ ಲೋಕದೊಳಗೆ' (ಲೇಖನ) ಪ್ರಜಾವಾಣಿ (ಅಭಿಮತ) – ಎಚ್.ಎಸ್. ಶಿವಪ್ರಕಾಶ್‌ರವರ ಪ್ರತಿಸ್ಪಂದನ, ಶುಕ್ರವಾರ, ೧೫ ನೇ ಫೆಬ್ರವರಿ, ೨೦೧೩. ಪು. ೦೬.
- ಪ್ರಜಾವಾಣಿ ಸಾಪ್ತಾಹಿಕ ಪುರವಾಣಿ (ಅನುಸಂಧಾನ) – ನರಹಳ್ಳಿ ಬಾಲಸುಬ್ರಹ್ಮಣ್ಯರವರ ವಿಮರ್ಶೆ ಭಾನುವಾರ, ೨೧ ಏಪ್ರೆಲ್, ೨೦೧೩. ಪು. ೦೬.
- ಕೃಷ್ಣಮೂರ್ತಿ ಹನೂರರ 'ಅಜ್ಞಾತನೊಬ್ಬನ ಆತ್ಮಚರಿತ್ರೆ' (ಲೇಖನ) ಕಸ್ತೂರಿ ಪತ್ರಿಕೆ, ಟಿ.ಪಿ. ಅಶೋಕ, ಸೆಪ್ಟಂಬರ್ ೨೦, ೨೦೧೩.
- 'ಬಹು ಆಯಾಮಗಳ ಉತ್ಕೃಷ್ಟ ಕಾದಂಬರಿ' (ಲೇಖನ), ಗಾಂಧಿಬಜಾರ್ ಪತ್ರಿಕೆ, ಡಾ. ಜಿ. ಎನ್. ಉಪಾಧ್ಯ, ಮುಂಬೈ. ಜೂನ್ ೨೦೧೩.

- 'ಹನೂರರು ಹೇಳಿದ ಅಜ್ಞಾತನ ಆತ್ಮಚರಿತ್ರೆ' (ಲೇಖನ) ಎಸ್. ಆರ್. ವಿಜಯ ಶಂಖರ್, ವಿಜಯವಾಣಿ ಪತ್ರಿಕೆ, ಜುಲೈ ೧೩ ೨೦೧೩.
- 'ಅಜ್ಞಾತರ ಕಥನಗಳ ಕಾಲು ಹಾದಿಯಲ್ಲಿ' ಕೃಷ್ಣಮೂರ್ತಿ ಹನೂರು, ಪ್ರಜಾವಾಣಿ, ಭಾನುವಾರ, ೦೫ ಮೇ ೨೦೧೩.
- 'History wears a new look', H. S. Raghavendra Rao, Friday,05.04.2013.